ಎಂ.ಫಿಲ್. ಪದವಿಯ ಸಂಪ್ರಬಂಧ

# ಮೂರು ಕನ್ನಡ ದಲಿತ ಆತ್ಮಕಥೆಗಳಲ್ಲಿ ಹೆಣ್ಣು

ಸಂಶೋಧನ ವಿದ್ಯಾರ್ಥಿ
ರವಿಕುಮಾರ್

ಮಾರ್ಗದರ್ಶಕರು
ಡಾ|| ಕೆ. ವಿ. ಶ್ರೀನಿವಾಸ ಮೂರ್ತಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು,
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ
ಮೂಲಕ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದೆ
2007

<u>ಎಂ.ಫಿಲ್. ಪದವಿಯ ಸಂಪ್ರಬಂಧ</u>

# ಮೂರು ಕನ್ನಡ ದಲಿತ ಆತ್ಮಕಥೆಗಳಲ್ಲಿ ಹೆಣ್ಣು

ಸಂಶೋಧನ ವಿದ್ಯಾರ್ಥಿ

**ರವಿಕುಮಾರ್**

ಮಾರ್ಗದರ್ಶಕರು

**ಡಾ|| ಕೆ. ವಿ. ಶ್ರೀನಿವಾಸ ಮೂರ್ತಿ**






ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು,
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ
ಮೂಲಕ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದೆ
**2007**

## ದೃಢೀಕರಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ೨೦೦೬-೦೭ನೇ ಸಾಲಿನ ಎಂ.ಫಿಲ್. ಪದವಿಗಾಗಿ 'ಮೂರು ಕನ್ನಡ ದಲಿತ ಆತ್ಮಕಥೆಗಳಲ್ಲಿ ಹೆಣ್ಣು' ಸಂಪ್ರಬಂಧವನ್ನು ಡಾ॥ ಕೆ. ವಿ. ಶ್ರೀನಿವಾಸ ಮೂರ್ತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 11/8/2007 ಸಹಿ [signature]

ಸ್ಥಳ : ಬೆಂಗಳೂರು (ಹೆಸರು : ರವಿಕುಮಾರ್)

# ದೃಢೀಕರಣ ಪತ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ೨೦೦೬-೦೭ನೇ ಸಾಲಿನ ಎಂ.ಫಿಲ್. ಪದವಿಗಾಗಿ 'ಮೂರು ಕನ್ನಡ ದಲಿತ ಆತ್ಮಕಥೆಗಳಲ್ಲಿ ಹೆಣ್ಣು' ಸಂಪ್ರಬಂಧವನ್ನು ಶ್ರೀ ರವಿಕುಮಾರ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 11/8/07 ಸಹಿ :

ಸ್ಥಳ : ಬೆಂಗಳೂರು (ಹೆಸರು : **ಡಾ|| ಕೆ. ವಿ. ಶ್ರೀನಿವಾಸ ಮೂರ್ತಿ**)

ವಿಷಯ :

## ಮೂರು ಕನ್ನಡ ದಲಿತ ಆತ್ಮಕಥೆಗಳಲ್ಲಿ ಹೆಣ್ಣು

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನ ಸ್ವರೂಪ, ವ್ಯಾಪ್ತಿ ಮತ್ತು ಉದ್ದೇಶ

ಕನ್ನಡ ಸಾಹಿತ್ಯಕ್ಕೆ ಅನೇಕ ಶತಮಾನಗಳ ಇತಿಹಾಸವಿದೆ. ಈ ಇತಿಹಾಸದಲ್ಲಿ ಅನೇಕ ವಿಭಿನ್ನ ಸಾಹಿತ್ಯ ಪ್ರಕಾರಗಳಿವೆ. ಬ್ರಿಟೀಷರು ಭಾರತಕ್ಕೆ ಬಂದ ನಂತರ ಇಲ್ಲಿನ ಶಿಕ್ಷಣ ವ್ಯವಸ್ಥೆ ಬದಲಾಯಿತು. ಈ ವ್ಯವಸ್ಥೆಯ ಫಲದಿಂದಾಗಿ ಶೋಷಣೆಗೆ ಒಳಗಾಗಿದ್ದವರಿಗೆ ಮತ್ತು ಶೂದ್ರರಿಗೆ ಶಿಕ್ಷಣ ದೊರೆಯಲು ಪ್ರಾರಂಭವಾಯಿತು.

ಒಟ್ಟಾರೆಯಾಗಿ ಆ ವಿದೇಶಿ ಸಾಹಿತ್ಯ ಇಲ್ಲಿನ ಚಿಂತಕರ ಮೇಲೆ ಹೊಸಗಾಳಿ ಬೀಸಿದರಿಂದಾಗಿ ಹೊಸ ಹೊಸ ಸಾಹಿತ್ಯ ಪ್ರಕಾರಗಳು ಹುಟ್ಟಿಕೊಂಡವು. ಹಿಂದೆ ಕೂಡ ಸಾಹಿತ್ಯ ಪ್ರಕಾರಗಳಲ್ಲಿ ವೈವಿಧ್ಯತೆಯನ್ನು ಗುರ್ತಿಸಬಹುದು. ಹತ್ತನೇ ಶತಮಾನಕ್ಕಿಂತ ಹನ್ನೆರಡನೇ ಶತಮಾನವು ಬೇರೆಯದೇ ಶೈಲಿ, ಬೇರೆಯದೇ ದೃಷ್ಟಿಕೋನ, ಭಾಷೆಯ ಬಳಕೆಯೂ ಕೂಡ ಬೇರೆಯಾಗಿತ್ತು. ಸಾಹಿತ್ಯ ಎನ್ನುವುದು ಕೂತು ತಿಣುಕಿ ಬರೆಯುವಂತಹದಲ್ಲ ಅದು ಸಹಜವಾಗಿರಬೇಕು. ತಮ್ಮ ದಿನನಿತ್ಯದ ಬದುಕಿನ ಕನ್ನಡಿಯಂತಿರಬೇಕು ಎನ್ನುವ ಆಶಯುಗಳೊಂದಿಗೆ ಹುಟ್ಟಿಕೊಂಡಿದೆ. ವಚನ ಸಾಹಿತ್ಯ, ಪಂಪ, ರನ್ನ, ಪೊನ್ನರಂತಹವರ ಸಾಹಿತ್ಯಕ್ಕೂ, ವಚನ ಸಾಹಿತ್ಯಕ್ಕೂ ಬೇರೆಯದೇ ಆದ ಲಕ್ಷಣಗಳಿವೆ. ಆದುದರಿಂದಲೇ ಆಧುನಿಕತೆ ಎನ್ನುವಂತಹದು ಸದಾ ಬೆಳೆದುಕೊಂಡು ಬರುವಂತಹದ್ದು. ಹತ್ತನೇ ಶತಮಾನಕ್ಕೆ ಹೋಲಿಸಿದರೆ ಹನ್ನೆರಡನೇ ಶತಮಾನ ಆಧುನಿಕವೆನಿಸುತ್ತದೆ. ಹನ್ನೆರಡನೇ ಶತಮಾನಕ್ಕೆ ಹೋಲಿಸಿದರೆ ಹದಿನಾಲ್ಕನೇ ಶತಮಾನ ಆಧುನಿಕವೆನಿಸುತ್ತದೆ. ಈ ರೀತಿಯ ಬೆಳವಣಿಗೆಯ ಇತಿಹಾಸದಲ್ಲಿ ವಚನ ಸಾಹಿತ್ಯ, ದಾಸ ಸಾಹಿತ್ಯ ಹುಟ್ಟಿ ಬೆಳೆದಿದೆ. ಈ ರೀತಿಯಲ್ಲಿ ಹದಿನೆಂಟನೇ ಶತಮಾನವನ್ನೇ ದೃಷ್ಟಿಯಲ್ಲಿರಿಸಿಕೊಂಡು ನೋಡಿದರೆ ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಎಂದು ಕರೆದುಕೊಳ್ಳುತ್ತೇವೆ.

ಅಧ್ಯಯನಕಾರರು ಹದಿನೆಂಟನೇ ಶತಮಾನದಿಂದೀಚೆಗೆ ಬೆಳೆದಂತಹ ಸಾಹಿತ್ಯವನ್ನು ಆಧುನಿಕ ಸಾಹಿತ್ಯ ಎಂದು ಕರೆದಿದ್ದಾರೆ. ಈ ಆಧುನಿಕ ಸಾಹಿತ್ಯ

ಘಟ್ಟಗಳು ಎನಿಸಿಕೊಂಡಂತಹ ನವೋದಯ, ಪ್ರಗತಿಶೀಲ, ನವ್ಯ, ದಲಿತ ಮತ್ತು ಬಂಡಾಯ ಈ ಐದು ಬಹುಮುಖ್ಯ ಘಟ್ಟಗಳಲ್ಲಿ ಇಲ್ಲಿ ಆಯ್ಕೆ ಮಾಡಿಕೊಂಡಿರುವಂತಹ ವಿಷಯು ಕೇವಲ ದಲಿತ ಸಾಹಿತ್ಯಕ್ಕೆ ಸಂಬಂಧಪಟ್ಟಿರುವುದರಿಂದ ದಲಿತ ಸಾಹಿತ್ಯಕ್ಕೆ ಹೆಚ್ಚಿನ ಮಹತ್ವ ನೀಡಲಾಗಿದೆ.

ದಲಿತ ಸಾಹಿತ್ಯ ಹುಟ್ಟಿಕೊಳ್ಳುವುದಕ್ಕೆ ಬಹಳ ಮುಖ್ಯ ಕಾರಣ ಬ್ರಿಟೀಷರ ಆಗಮನ ಅಂದ ಮಾತ್ರಕ್ಕೆ ಬ್ರಿಟೀಷರ ಆಗಮನವನ್ನು ಒಪ್ಪಿಕೊಳ್ಳುತ್ತಿದ್ದೇನೆ ಎಂದರ್ಥವಲ್ಲ.

ಕೆಲವು ಕ್ಷೇತ್ರಗಳಲ್ಲಿ ಬಹಳಷ್ಟು ಉಪಯೋಗವಾಗಿದೆ. ಅನೇಕ ಚಿಂತಕರು ಕನ್ನಡ ಸಾಹಿತ್ಯಕ್ಕೆ ಅಪಾರ ಕೊಡುಗೆ ಕೊಟ್ಟಿದ್ದಾರೆ.

ಬ್ರಿಟೀಷರ ಆಗಮನಕ್ಕಿಂತ ಹಿಂದೆ ಶೂದ್ರ ಮತ್ತು ದಲಿತ ವರ್ಗಗಳು ಶಿಕ್ಷಣ ವ್ಯವಸ್ಥೆಯಿಂದ ದೂರ ಉಳಿದಿದ್ದವು. ದಲಿತರು ಕೇವಲ ಊರಿನ ಸೇವೆ ಮಾಡುವುದಕ್ಕೆ ಮಾತ್ರ ಹುಟ್ಟಿದ್ದಾರೆ ಎನ್ನುವ ರೀತಿಯಲ್ಲಿ ದಲಿತ ಮನುಷ್ಯರನ್ನು ಪಳಗಿಸಲಾಗಿತ್ತು.

"ದಲಿತ" ಎನ್ನುವ ಪದವನ್ನು ವಿವರಿಸುವುದು ಸುಲಭವಾದ ಸಂಗತಿಯಲ್ಲ. ಈ ಪದವು ತುಂಬಾ ಸಂಕೀರ್ಣವೂ, ಜೊತೆಗೆ ವಿರೋಧವೂ ಅನ್ನಬಹುದಾದ ಕೆಲವು ಅರ್ಥಗಳನ್ನು ಒಳಗೊಂಡಿದೆ. ಅನೇಕ ಚಿಂತಕರು ಈ ಪದಕ್ಕೆ ಸರಿಯಾದ ಅರ್ಥ ಕೊಡಲು ಶ್ರಮಿಸಿದ್ದಾರೆ. ಅನೇಕ ಜನರ ವಾದವನ್ನು ಅರವಿಂದ ಮಾಲಗತ್ತಿಯವರು ಸೂಕ್ಷ್ಮ ರೀತಿಯಲ್ಲಿ ಸಂಗ್ರಹಿಸಿಕೊಟ್ಟಿದ್ದಾರೆ. ಅರವಿಂದ ಮಾಲಗತ್ತಿಯವರ ಪ್ರಕಾರ ದಲಿತ ಪದದ ಅರ್ಥ ವಿವರಣೆಯಲ್ಲಿ ಮೂರು ಪ್ರಮುಖ ವಾದಗಳಿವೆ.

೧) "ಶೋಷಣೆ ಎಂಬ ಪದಕ್ಕೆ ಜಾತಿ ಭೇದವಿಲ್ಲ. ಆರ್ಥಿಕ, ಸಾಮಾಜಿಕ, ರಾಜಕೀಯ ರಂಗದಲ್ಲೆಲ್ಲಾ ಶೋಷಣೆಗೆ ಒಳಗಾದ ಎಲ್ಲಾ ಜನರು ದಲಿತರು.

೨) ಪಂಚಮರು ಅಥವಾ ಬಹಿಷ್ಕೃತರು ಎಂದು ಕರೆಯಿಸಿಕೊಳ್ಳುವ ಅಸ್ಪೃಶ್ಯರೆಲ್ಲರೂ ದಲಿತರು.

೩) ಅಸ್ಪೃಶ್ಯರು ಸೇರಿದಂತೆ ಅಸ್ಪೃಶ್ಯತೆಯ ನೋವನ್ನು ಅನುಭವಿಸದಿದ್ದರೂ ಅಸ್ಪೃಶ್ಯತೆಯ ಹಾಗೆ ಆರ್ಥಿಕ, ಸಾಮಾಜಿಕ – ರಾಜಕೀಯ ರಂಗದಲ್ಲಿ ಶೋಷಣೆಗೆ ಒಳಗಾದ ಜನರು ಸೇರಿ ದಲಿತರಾಗುತ್ತಾರೆ."[1]

ಈ ರೀತಿಯಲ್ಲಿ 'ದಲಿತ' ಎನ್ನುವ ಪದಕ್ಕೆ ಅರ್ಥವನ್ನು ಕೊಡಲಾಗಿದೆ. ಶತಮಾನದಿಂದ ಜನ ಸಮುದಾಯಗಳಲ್ಲಿ ಆರ್ಥಿಕ, ಸಾಮಾಜಿಕ, ರಾಜಕೀಯವಾಗಿ ಮತ್ತು ಶೈಕ್ಷಣಿಕವಾಗಿ ಶೋಷಣೆಗೆ ಒಳಗಾದವರು. ಒಟ್ಟು ಮನುಷ್ಯ ಸಮಾಜದೊಂದಿಗೆ ಬದುಕಲಾಗದೆ ಊರ ಹೊರಗೆ ವಾಸಿಸಿ ಕೀಳು ವೃತ್ತಿಗೆ ಅವಲಂಬಿತರಾಗಿ ಹೆಸರು ಹೇಳಿಕೊಳ್ಳಲು ನಾಚಿಕೆ ಪಡುವ ಅಸ್ಪೃಶ್ಯರು ಅಥವಾ ಬಹಿಷ್ಕೃತರೆನಿಸಿಕೊಂಡವರೆಲ್ಲರೂ ದಲಿತರೆನಿಸಿಕೊಳ್ಳುತ್ತಾರೆ. ಇಂಥ ದಲಿತರು ಬರೆದ ಸಾಹಿತ್ಯವೇ ದಲಿತ ಸಾಹಿತ್ಯವಾಗುತ್ತದೆ. ಇತಿಹಾಸವನ್ನು ನೋಡಿದರೆ ಓದುಬರಹದಿಂದ ವಂಚಿತರಾದ ಈ ಜನರು ಸಾಹಿತ್ಯ ಕ್ಷೇತ್ರದಲ್ಲಿ ಮಾಡಿದ ಕೃಷಿಯನ್ನು ಪ್ರತ್ಯೇಕವಾಗಿ ಗುರುತಿಸಲು ಸಾಧ್ಯವಿದೆ. ಈ ನಿರ್ಧಾರಗಳನ್ನು ತೆಗೆದುಕೊಳ್ಳುವಾಗ ಇನ್ನೊಂದು ಸಮಸ್ಯೆಯನ್ನು ಪರಿಹರಿಸಿಕೊಳ್ಳಬೇಕು. ಅದೆಂದರೆ ಅಸ್ಪೃಶ್ಯ ವರ್ಗಕ್ಕೆ ಸೇರಿದವರು ಬರೆದ ಎಲ್ಲಾ ಸಾಹಿತ್ಯವು 'ದಲಿತ' ಸಾಹಿತ್ಯವಾಗುವುದೆ ಎನ್ನುವ ಪ್ರಶ್ನೆ ಕೇಳಿಕೊಂಡರೆ, ಓದು–ಬರಹ ಪಡೆದ ಒಬ್ಬ ದಲಿತ ವ್ಯಕ್ತಿಯು ಮೇಲ್ಜಾತಿ ಮೇಲ್ವರ್ಗದವರ ಪ್ರಭಾವದಿಂದ ಜನ ವಿರೋಧಿ ಸಾಹಿತ್ಯ ಸೃಷ್ಟಿಸಿದರು. ಆಗ ಅದನ್ನು ದಲಿತ ಸಾಹಿತ್ಯದ ಪರಧಿಯೊಳಗೆ ಸೇರುತ್ತದೆಯಾ ಎನ್ನುವುದನ್ನೇ ಪರಿಶೀಲಿಸಿಕೊಳ್ಳಬೇಕಾದಿತು. ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ದಲಿತ ಸಾಹಿತ್ಯಕ್ಕೆ ಅತ್ಯಂತ ಮಹತ್ವದ ಸ್ಥಾನ ಇದೆ ಎನ್ನುವುದನ್ನು ಅಲ್ಲಗಳೆಯುವಂತಿಲ್ಲ.

ಕನ್ನಡ ದಲಿತ ಸಾಹಿತ್ಯವು ಮರಾಠಿ ದಲಿತ ಸಾಹಿತ್ಯ ಹಾಗೂ ಮಾರ್ಕ್ಸ್, ಲೋಹಿಯಾ, ಡಾ॥ ಅಂಬೇಡ್ಕರ್ ವಾದಗಳು ಪ್ರಭಾವ ಮತ್ತು

---

[1] ಡಾ॥ ಪುರುಷೋತ್ತಮ ಬಿಳಿಮಲೆ (೨೦೦೫) ಬಂಡಾಯ–ದಲಿತ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ

ಪ್ರೇರಣೆಗಳಿಂದ ಹುಟ್ಟಿಕೊಂಡಿತು. ಇದರ ಜೊತೆಗೆ ಹನ್ನೆರಡನೇ ಶತಮಾನದ ವಚನ ಸಾಹಿತ್ಯ ಪ್ರೇರಣೆಯು ಇಲ್ಲ ಎಂದು ಹೇಳಲಾಗದು.

ಕನ್ನಡ ಸಾಹಿತ್ಯ ಇತಿಹಾಸದಲ್ಲಿ ದಲಿತರಾದವರು ಹುಟ್ಟಿನಿಂದ ಅಸ್ಪೃಶ್ಯರಾಗಿದ್ದು ದಲಿತ ಪ್ರಜ್ಞೆ, ದಲಿತ ಮನೋಧರ್ಮದ ನೆಲೆಯಲ್ಲಿ ದಲಿತಾನುಭವದ ಹಿನ್ನೆಲೆಯಿಂದ ಅಭಿವ್ಯಕ್ತಿಗೊಂಡ ಸಾಹಿತ್ಯವನ್ನು 'ದಲಿತ ಸಾಹಿತ್ಯ' ಎಂದು ತಿಳಿಯಬೇಕು.

ಈ ಹೇಳಿಕೆಯಿಂದ ದಲಿತ ಸಾಹಿತ್ಯ ಮತ್ತು ದಲಿತೇತರ ಸಾಹಿತ್ಯಕ್ಕೂ ಇರುವ ವ್ಯತ್ಯಾಸ ತಿಳಿಯಬಹುದಾಗಿದೆ. ದಲಿತರ ಬದುಕನ್ನು ಅವರ ಸಂಸ್ಕೃತಿಯನ್ನು ಕುರಿತು ದಲಿತರೇ ಬರೆದಾಗ ದಲಿತರ ಅನುಭವ ನೋವು-ನಲಿವು ತಮ್ಮ ಹೃದಯದ ತುಡಿತ-ಮಿಡಿತಗಳು ಕೃತಿಯಲ್ಲಿ ಪ್ರಾಮಾಣಿಕತೆಯಿಂದ ಇರಲು ಸಾಧ್ಯವಾಗುತ್ತದೆ. ಆದರೆ ಹೊರಗಿನಿಂದ ದಲಿತರ ಬದುಕು ಸಂಸ್ಕೃತಿಗಳನ್ನು ನೋಡಿ ದಲಿತ ತುಡಿತ-ಮಿಡಿತಗಳನ್ನೇ ಕೃತಿಯಲ್ಲಿ ಕಟ್ಟಿಕೊಟ್ಟಾಗ ಅದು ಪ್ರಾಮಾಣಿಕತೆಯಿಂದ ಕೊಂಚ ದೂರವೇ ಇರುತ್ತದೆ ಎಂದು ಇಂದಿನ ಅನೇಕ ಚಿಂತಕರು ಒಪ್ಪಿಕೊಳ್ಳುತ್ತಾರೆ. ಹೊಡೆಸಿಕೊಂಡವನಿಗೆ ಮಾತ್ರ ಗೊತ್ತು ಅದರ ನೋವು, ನೋಡಿದವನಿಗೆ, ಆ ನೋವಿನ ತೀವ್ರತೆ ಎಷ್ಟು ತಟ್ಟಲು ಸಾಧ್ಯ ಎನ್ನುವುದನ್ನೇ ಪ್ರಶ್ನಿಸಿಕೊಳ್ಳಬೇಕಾಗುತ್ತೆ.

ಈ ಸಂದರ್ಭದಲ್ಲಿ ಆಫ್ರಿಕದ ಕಪ್ಪು ಮಹಿಳೆಯರ ಬಗ್ಗೆ ಕೂಡ ಯೋಚಿಸಬಹುದು. ಕಾರಣ ಭಾರತದ ದಲಿತ ಮಹಿಳೆಯರ ಮತ್ತು ಆಫ್ರಿಕದ ಕಪ್ಪು ಮಹಿಳೆಯರ ಬದುಕುಗಳಲ್ಲಿ ಒಂದೇ ರೀತಿಯ ಲಕ್ಷಣಗಳನ್ನು ಹೆಚ್ಚಾಗಿ ಗುರುತಿಸಬಹುದಾಗಿದೆ.

ಆಫ್ರಿಕನ್-ಅಮೇರಿಕನ್ ಕಪ್ಪು ಜನಾಂಗದ ಆತ್ಮಕಥೆಗಳನ್ನು, ಅದರಲ್ಲೂ ಗುಲಾಮ ಪದ್ಧತಿ ಪ್ರಬಲವಾಗಿ ಆಚರಣೆಯಲ್ಲಿದ್ದ ಪದ್ಧತಿಯ ಅತ್ಯಂತ ಹೀನಾಯ ಮುಖಗಳನ್ನು ಜಗತ್ತಿಗೆ ಪರಿಚಯಿಸುತ್ತವೆ. ಬಹುರಾಜ್ಯಗಳನ್ನು ಒಳಗೊಂಡು ಒಂದು ಬೃಹತ್ ರಾಷ್ಟ್ರವಾಗಿ ಅಮೇರಿಕಾ ಹೊರಹೊಮ್ಮುತ್ತಿದ್ದ ಹದಿನೆಂಟು-ಹತ್ತೊಂಭತ್ತನೆಯ ಶತಮಾನದ ಇತಿಹಾಸವನ್ನು ಹೇಳುತ್ತಲೇ ಈ

ಕಾಲಮಾನದಲ್ಲಿ ಬಿಳಿಯ ಜನಾಂಗಗಳೊಡನೆ ಸಂವಾದ ಸಾಧ್ಯತೆಯನ್ನು ಸ್ಥಾಪಿಸಿದವು ಎನ್ನುವುದು ಎರಡನೆಯ ಮುಖ್ಯ ಕಾರಣವಾಗಿದೆ. ಮುಂದೆ ಅವು ಅಮೇರಿಕನ್ ಸಂಸ್ಕೃತಿ, ಸಾಹಿತ್ಯಗಳನ್ನು ಪ್ರಭಾವಿಸುವ ಪರಂಪರೆಯಾಗಿ ಬೆಳೆದು ಸಾಹಿತ್ಯದ ದಿಕ್ಕನ್ನು ಬದಲಿಸಿದವು. ಅಷ್ಟೇ ಅಲ್ಲ. ಯುರೋಪನ್ನೂ ಸೇರಿಸಿಕೊಂಡು ವಿಶ್ವ ಸಾಹಿತ್ಯ ಚರ್ಚೆಗೆ ಒಂದು ಹೊಸ ಭೂಮಿಕೆಯನ್ನು ಸೃಷ್ಟಿಸಿದವು ಎನ್ನುವುದು ಕೂಡ ಒಂದು ಕಾರಣವಾಗಿದೆ.

ಹಾಗೆ ನೋಡಿದರೆ, ಮೌಖಿಕವಾದುದನ್ನು ಬಿಟ್ಟರೆ, ಲಿಖಿತ ಸಾಹಿತ್ಯ ಪರಂಪರೆಯಾಗಲಿ ಶಿಕ್ಷಣವಾಗಲಿ ಇಲ್ಲದ ಕಪ್ಪು ಜನಾಂಗ ಇಂಗ್ಲೀಷ್ ಭಾಷೆಯನ್ನು ಕಲಿತು ತಂಡೋಪ ತಂಡವಾಗಿ, ಅದರಲ್ಲೂ ಮಹಿಳೆಯರು ಆತ್ಮಕಥೆ, ಕಾವ್ಯ, ಪ್ರಬಂಧ, ಕಾದಂಬರಿ ಹೀಗೆ ವಿವಿಧ ಪ್ರಕಾರಗಳಲ್ಲಿ ತಮ್ಮ ಅಭಿವ್ಯಕ್ತಿಯನ್ನು ಸಾಧಿಸಲು ಆರಂಭಿಸಿದ್ದು ಒಂದು ಆಧುನಿಕ ಭಾಷಾ ವಿಸ್ಮಯವಾಗಿದೆ.

ಈ ಬರವಣಿಗೆಯ ಪ್ರಕ್ರಿಯೆಯು ಮನುಷ್ಯರು ಮನುಷ್ಯರನ್ನು ಶೋಷಿಸುವ ವ್ಯವಸ್ಥೆಯ ಕುರಿತು ಬಿಡುಗಡೆಯ ಕುರಿತು ಮುಂದುವರಿದ ಜನಾಂಗಗಳು ಒಂದು ಜನಾಂಗಕ್ಕೆ ತಿರಸ್ಕರಿಸಿದ ಮಾನವ ಹಕ್ಕುಗಳ ಕುರಿತು ಸಾರ್ವಜನಿಕವಾಗಿ ಹೊಸ ಸಂವಾದ ಚರ್ಚೆ ಆರಂಭವಾಗುವಂತೆ ಮಾಡಿತು. ಹೊಸ ಸಮಾಜದಲ್ಲಿ ಬದುಕಿನ ಬೇರೆ ಬೇರೆ ನೆಲೆಗಳಲ್ಲಿ ಆ ಜನಾಂಗ ತಲೆಯೆತ್ತಿ ನಿಲ್ಲಲು ಅಗತ್ಯವಾಗುವ ಆತ್ಮವಿಶ್ವಾಸವನ್ನು ತುಂಬಿತು. ಆದರೆ ಇದಕ್ಕೆ ಅವರು ಮುನ್ನೂರು ವರ್ಷಗಳ ಕಾಲ ನಿರಂತರವಾಗಿ ಕೊಂಚವೂ ವಿಶ್ರಾಂತಿಸದೆ ಬಡಿದಾಡಬೇಕಾಯಿತು. ನೆನಪುಗಳೇ ತಮ್ಮ ಜೀವನದ ಏಕೈಕ ಆಸ್ತಿಯನ್ನಾಗಿ ಪಡೆದ ಕಪ್ಪು ಜನಾಂಗ: ಹೋರಾಟ ಹೋರಾಟವನ್ನೆ ತಮ್ಮ ಇನ್ನೊಂದು ಚಿರ ಆಸ್ತಿಯನ್ನಾಗಿ ಮಾಡಿಕೊಂಡವು. ಹದಿನೆಂಟನೆಯ ಶತಮಾನದಲ್ಲಿ ಅಸ್ತಿತ್ವಕ್ಕಾಗಿ ಶುರುವಾದ ಈ ಹೋರಾಟದಲ್ಲಿ ಬಿಡುಗಡೆ ಪಡೆದವರು ಕಪ್ಪು ಜನಾಂಗದ ಪುರುಷರು, ಮಕ್ಕಳು, ಮಹಿಳೆಯರು ಮಾತ್ರವಲ್ಲ. ಬದಲಿಗೆ, ಯುರೋಪಿಯನ್ ಪುರುಷ ದಬ್ಬಾಳಿಕೆಯಿಂದ ಬಿಳಿಯ ಮಹಿಳೆಯರೂ ವಿಮೋಚನೆಯನ್ನು ಪಡೆದರು.

ಅಸ್ತಿತ್ವ ಮತ್ತು ಬದುಕಿಗಾಗಿ ಸಾರ್ವಜನಿಕವಾಗಿ ಹೋರಾಡುವಾಗಲೂ ಕಪ್ಪು ಜನಾಂಗ ತಮ್ಮ ತಾಳ್ಮೆ, ವಿವೇಕ, ಮಾನವೀಯ ಅನುಕಂಪ ಮತ್ತು ಸ್ಥೈರ್ಯಗಳನ್ನು ಕಳೆದುಕೊಳ್ಳದಿರುವುದು ಅದರ ಬಹುದೊಡ್ಡ ಗುಣವಾಗಿದೆ.

ಅಸಂಖ್ಯ ಕಪ್ಪು ಪುರುಷ ಮತ್ತು ಮಹಿಳಾ ಚಿಂತಕರಿಂದ ಪ್ರಾರಂಭವಾದ ಸಾಹಿತ್ಯ ಪರಂಪರೆ ಕಪ್ಪು ಜನಾಂಗ ನೊಬೆಲ್ ಪಾರಿತೋಷಕವೂ ಸೇರಿ ವಿಶ್ವದ ಅಸಂಖ್ಯ ಪ್ರಶಸ್ತಿಗಳನ್ನು ಪಡೆದು, ವಿಶ್ವ ಜನಾಂಗ ತನ್ನತ್ತ ನೋಡುವಂತೆ ಮಾಡುವಲ್ಲಿಗೆ ತಂದು ನಿಲ್ಲಿಸಿದೆ. ಟೋನಿ ಮಾರಿಸನ್ ಅಲೈಸ್ ವಾಕರ್ ಮಾಯಾ ಏಂಜಲೋ ಇಂಥ ಒಂದೆರಡು ಹೆಸರು ಹೇಳಿದರೂ ಸಾಕು ಅವರ ಸಾಹಿತ್ಯ ಪರಂಪರೆಯ ಬುನಾದಿ ಎಷ್ಟು ಗಟ್ಟಿ ಎಂದು ಅರಿವಾಗುತ್ತದೆ. ಆರಂಭದಲ್ಲಿ ಇಂತಹ ಸಾಹಿತ್ಯದ ಬಗ್ಗೆ ಪ್ರಜ್ಞಾಪೂರ್ವಕವಾಗಿ ಯೂರೋಪಿಯನ್ ಜನಾಂಗ ತೋರಿಸಿದ ಉಪೇಕ್ಷೆ ಮತ್ತು ಅದನ್ನು ಹತ್ತಿಕ್ಕಲು ನಡೆಸಿದ ಪ್ರಯತ್ನಗಳ ಪರೀಕ್ಷೆಯಲ್ಲಿ ಗೆದ್ದು ಬಂದಿರುವ ಕಪ್ಪು ಸಾಹಿತ್ಯ ತನ್ನ ಪ್ರಾಮುಖ್ಯವನ್ನು ಇನ್ನೂರೈವತ್ತು ವರ್ಷಗಳಿಂದ ಉಳಿಸಿಕೊಂಡು ಬರುವಲ್ಲಿ ಸಫಲವಾಗಿದೆ. ಅದಕ್ಕೆ ಕಾರಣ ಆ ಸಾಹಿತ್ಯದ ಒಳತಿರುಳೇ ಆಗಿದೆ. ಇಂದು ಅಮೇರಿಕಾ ಹಾಗೂ ಬ್ರಿಟನ್‌ನ ಬಹುಪಾಲು ವಿಶ್ವವಿದ್ಯಾಲಯಗಳಲ್ಲಿ ಕಪ್ಪು ಜನಾಂಗದ ಸಾಹಿತ್ಯ ಅಧ್ಯಯನ ಪೀಠಗಳಿರುವುದು ಈ ಮಾತಿಗೆ ಪುಷ್ಟಿಯನ್ನೊದಗಿಸುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಭಾರತದ ಮಹಿಳೆಯರಿಗೆ ಮತ್ತು ದಲಿತ ವರ್ಗದ ಚಿಂತಕರ ದೃಷ್ಟಿಯಿಂದ ನೋಡಿದರೆ ಅನೇಕ ವಿಚಾರಗಳು ಒಂದೇ ರೀತಿಯಲ್ಲಿ ತೋರುತ್ತವೆ.

ಈ ಅಂಶಗಳನ್ನು ಮುಂದುವರಿಸಿಕೊಂಡು ಕನ್ನಡ ಸಾಹಿತ್ಯ ಪರಂಪರೆಯನ್ನು ನೋಡಿದರೆ ದಲಿತ ಸಾಹಿತ್ಯ ಭಿನ್ನವಾಗಿ ನಿಲ್ಲುತ್ತದೆ. ಭಾಷೆ ಪದಗಳ ಜೋಡಣೆ ಆಯ್ಕೆಮಾಡಿಕೊಳ್ಳುವ ವಿಷಯ ಕೃತಿ ಕಟ್ಟುವ ಶೈಲಿ ಎಲ್ಲವೂ ಕೂಡ ವಿಶಿಷ್ಟವಾಗಿಯೇ ನಿಲ್ಲುತ್ತದೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ದಲಿತ ಸಾಹಿತ್ಯದ ಕುರುಹು ಕಾಣಿಸಿಕೊಂಡಿದ್ದು ಶ್ರೀ ಬಸವ ಲಿಂಗಪ್ಪನವರ ಬೂಸಾ ಚಳುವಳಿಯ ನಂತರವೇ ಎನ್ನಬಹುದು. ಕಾರಣ ದಲಿತೇತರರು ಕನ್ನಡ ಸಾಹಿತ್ಯದೊಳಗೆ ತಮ್ಮನ್ನು ತಾವು ಸುಲಭವಾಗಿ ಗುರುತಿಸಿಕೊಳ್ಳುತ್ತಾರೆ.

ಆದರೆ ದಲಿತರು ಅಷ್ಟು ಸುಲಭವಾಗಿ ಗುರುತಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಸಾವಿರ ವರ್ಷದ ಸಾಹಿತ್ಯ ಇತಿಹಾಸ ನೋಡಿದರೆ ಚಾತುರ್ವರ್ಣ್ಯ ಪದ್ಧತಿ ಅನ್ವಯ ಸೃಷ್ಟಿಯಾದ ಸಾಹಿತ್ಯದಲ್ಲಿ ದಲಿತರ ಬಗ್ಗೆ ನಕಾರಾತ್ಮಕ ನಿಲುವುಗಳೇ ಎದ್ದು ಕಾಣುತ್ತವೆ. ಅನೇಕ ಅನಗತ್ಯ ಗಲೀಜು ತುಂಬಿರುವುದು ಕಂಡುಬರುತ್ತದೆ. ಆ ರೀತಿಯ ಗಲೀಜನ್ನು ಸೋಸಬೇಕು ಎನ್ನುವಂತಹ ಆಶಯದೊಂದಿಗೆ ಹೊಸ ಚಳುವಳಿ ಬೆಳೆಯತೊಡಗಿತು. ಅದರ ಫಲವಾಗಿಯೇ ಬಂದಂತಹದು. ಬೂಸಾ ಚಳುವಳಿ ಈ ಚಳುವಳಿಯ ನೇತೃತ್ವವನ್ನು ಶ್ರೀ ಬಸವಲಿಂಗಪ್ಪನವರು ವಹಿಸಿಕೊಂಡು ಕನ್ನಡ ಸಾಹಿತ್ಯ ಬೂಸಾ ಎಂದು ಹೇಳಿದುದರ ಹಿಂದೆ ಸಾಹಿತ್ಯ ಪರಂಪರೆಯನ್ನು ಧಿಕ್ಕರಿಸುವ ಮಾತಿದ್ದರೂ ಅವರು ಹನ್ನೆರಡನೆಯ ಶತಮಾನವನ್ನು ಒಪ್ಪಿಕೊಂಡಿದ್ದಾರೆ.

ಈ ಎಲ್ಲಾ ಅಂಶಗಳು ದಲಿತ ಸಾಹಿತ್ಯದ ಹುಟ್ಟು ಮತ್ತು ಬೆಳವಣಿಗೆಯ ಪೂರಕ ಅಂಶಗಳನ್ನಾಗಿ ಗುರುತಿಸಿಕೊಳ್ಳಬಹುದಾಗಿದೆ. ಒಂದು ಚಳುವಳಿಯಾಗಿ ಹುಟ್ಟಿಕೊಂಡಂತಹದು ನಂತರ ಒಂದು ಸಾಹಿತ್ಯ ಪಂಥವಾಗಿ ಬೆಳೆದಿರುವುದನ್ನು ಕಾಣಬಹುದಾಗಿದೆ.

ನೇರವಾಗಿ ಅಧ್ಯಯನದ ವಿಷಯಕ್ಕೆ ಬರುವುದಾದರೆ ಕನ್ನಡ ದಲಿತ ಸಾಹಿತ್ಯದಲ್ಲಿ ಒಂದು ಬಹುಮುಖ್ಯ ಪ್ರಕಾರವಾದಂತಹ ಆತ್ಮ ಕಥೆಗಳನ್ನು ಕೇಂದ್ರವಾಗಿರಿಸಿಕೊಂಡು ಮೂರು ಕನ್ನಡ ದಲಿತ ಆತ್ಮ ಕಥೆಗಳಲ್ಲಿ 'ಹೆಣ್ಣು' ಎನ್ನುವ ವಿಷಯವನ್ನು ಆಯ್ಕೆಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

ಪದವಿ ತರಗತಿಯಲ್ಲಿ ಓದುತ್ತಿರಬೇಕಾದರೆ ಅನೇಕ ವಿಷಯುಗಳು ಚರ್ಚೆಗೆ ಬರುತ್ತಿದ್ದವು. ಅಂತಹ ಚರ್ಚೆಗಳಲ್ಲಿ ದಲಿತ ಸಾಹಿತ್ಯದ ಬಗ್ಗೆ ಅಸ್ಪೃಶ್ಯತೆಯ ಬಗ್ಗೆ ಹೆಚ್ಚು ಚರ್ಚೆಯಾಗುತ್ತಿತ್ತು. ಆ ಕಾರಣದಿಂದ ದಲಿತ

ಸಾಹಿತ್ಯದ ಕಡೆಗೆ ಗಮನ ಹೆಚ್ಚಾಗಿ ಹರಿಯತೊಡಗಿತು. ನಂತರ ಸಿದ್ಧಲಿಂಗಯ್ಯನವರ ಕವಿತೆಗಳನ್ನು ಓದಿದಾಗ ಬೇರೆ ಕವಿತೆಗಳಿಗಿಂತ ಭಿನ್ನವೆನಿಸುತ್ತಿದ್ದವು. ದಿನನಿತ್ಯದ ಬದುಕಿನ ಬಗ್ಗೆ ಮಾತನಾಡಿದಂತೆ ತೋರುತ್ತಿದ್ದವು. ಆದುದರಿಂದ ಅವುಗಳ ಬಗ್ಗೆ ವಿಶೇಷವಾದ ಆಸಕ್ತಿ ಮೂಡತೊಡಗಿತು. ಆ ಕಾರಣಕ್ಕಾಗಿ ಎಂ.ಫಿಲ್. ಅಧ್ಯಾಯನಕ್ಕಾಗಿ ಈ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅಂದರೆ "ಮೂರು ಕನ್ನಡ ದಲಿತ ಆತ್ಮಕಥೆಗಳಲ್ಲಿ ಹೆಣ್ಣು" ಈ ಶೀರ್ಷಿಕೆಯ ಅಡಿಯಲ್ಲಿ ಚರ್ಚಿಸಲು ಬಯಸಿರುವ ಮೂರು ಜನರೆಂದರೆ ಪ್ರೊ॥ ಅರವಿಂದ ಮಾಲಗತ್ತಿ, ಡಾ॥ ಸಿದ್ಧಲಿಂಗಯ್ಯ ಮತ್ತು ದು. ಸರಸ್ವತಿ ಇವರುಗಳ ಗೌರ್ಮೆಂಟ್ ಬ್ರಾಹ್ಮಣ, ಊರುಕೇರಿ ಮತ್ತು ಈಗೇನ್ ಮಾಡೀರಿ ? ಈ ಮೂರು ಜನರ ಆತ್ಮಕಥೆಗಳನ್ನು ಆಯ್ಕೆಮಾಡಿಕೊಳ್ಳುವ ಮೊದಲು ಕನ್ನಡದ ಎಲ್ಲಾ ದಲಿತ ಆತ್ಮಕಥೆಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಳ್ಳುವುದು ಉದ್ದೇಶವಾಗಿತ್ತು. ಆದರೆ ಸಮಯ ಮತ್ತು ಎಂ.ಫಿಲ್.ಗೆ ಕೆಲವು ಮಿತಿಗಳಿರುವುದರಿಂದ ಆ ಯೋಚನೆಗಳನ್ನು ಕೈಬಿಟ್ಟು ಕೇವಲ ಮೂರು ಆತ್ಮಕಥೆಗಳನ್ನು ಮಾತ್ರ ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ.

ಆತ್ಮಕಥೆಗಳ ಅಧ್ಯಯನಕ್ಕೆ ಒಂದು ಸರಿಯಾದ ಚೌಕಟ್ಟಿನಲ್ಲಿ ನೋಡುವ ದೃಷ್ಟಿಯಿಂದಾಗಿ ಹೆಣ್ಣನ್ನ ಕೇಂದ್ರವಾಗಿರಿಸಿಕೊಂಡು ಅವಳ ಧಾರ್ಮಿಕ, ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಅವಳಿಗಿರುವ ಮಿತಿಗಳೇನು ಎಲ್ಲಿ ಸ್ವತಂತ್ರಳಾಗುತ್ತಾಳೆ, ಜೊತೆಗೆ ಆತ್ಮಕಥೆಯ ನಾಯಕನಿಗೆ ಹೇಗೆ ಪೂರಕವಾಗಿರುತ್ತಾಳೆ ಎನ್ನುವುದನ್ನ ಅಧ್ಯಯನ ಮಾಡುವ ಉದ್ದೇಶವಿದೆ.

ಈ ಎಲ್ಲಾ ಅಂಶಗಳಿಗಿಂತ ಈ ವಿಷಯವನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದ್ದರ ಹಿಂದೆ ಮುಖ್ಯ ಕಾರಣಗಳಿವೆ. ಅದರಲ್ಲಿ ಬಹಳ ಮುಖ್ಯವೆನಿಸಿದ್ದು ದಲಿತ ಆತ್ಮಕಥೆಗಳು ಬರಿ ಸಾಹಿತ್ಯ ಪ್ರಕಾರವಲ್ಲ. ಮಾತಿಲ್ಲದ, ನೋವುಗಳಡಿ ನರಳುತ್ತಿದ್ದ ದಲಿತ ಸಮುದಾಯದ ಆಕ್ರೋಶದ ಅಭಿವ್ಯಕ್ತಿ ಸಹ ಆಗಿದೆ. ದಲಿತ ಆತ್ಮಕಥೆಗಳು ಹೋರಾಟಗಳ ಮತ್ತು ಆ ಹೋರಾಟಕ್ಕೆ ಕಾರಣಗಳ ಜೊತೆಗೆ ಆ ಸಮುದಾಯದ ಕನಸುಗಳ ಬಗ್ಗೆ ದಾಖಲೆಗಳಿರುತ್ತವೆ. ದಲಿತ ಸಾಹಿತಿಯ ಆತ್ಮಕಥೆಗಳು ಒಬ್ಬ ವ್ಯಕ್ತಿಯ ಖಾಸಗಿ ಕಥನವಲ್ಲ,

ಬದಲಾಗಿ ಆ ಒಟ್ಟು ಸಮುದಾಯದ ಸಮಗ್ರ ಬದುಕಿನ ಮೊತ್ತವಾಗಿರುತ್ತದೆ. ಈ ಅಂಶಗಳನ್ನು ಗಂಭೀರವಾಗಿ ಅಧ್ಯಯನ ಮಾಡಲಿಕ್ಕೆ ಈ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ದಲಿತ ಸಮುದಾಯದ ಮೇಲಾಗುತ್ತಿರುವ ದೌರ್ಜನ್ಯ ಇಂದಿನದಲ್ಲ. ಎಷ್ಟೋ ಶತಮಾನಗಳಿಂದಲೂ ಈ ಕ್ರೂರತೆ ನಡೆದುಕೊಂಡು ಬರುತ್ತಿದೆ. ಅದರ ಫಲದಿಂದ ಲೆಕ್ಕವಿಲ್ಲದಷ್ಟು ಜನರು ಬೆಂಕಿಗೊ ಮೇಲು ವರ್ಗದ ಚಾಟಿಗಳಿಗೊ, ಅವರ ಕತ್ತಿಗಳಿಗೊ, ಬಂದೂಕಿನ ಗುಂಡುಗಳಿಗೊ ಬಲಿಯಾಗಿದ್ದಾರೆ. ಬಲಿಯಾಗುತ್ತಲೂ ಇದ್ದಾರೆ. ಈ ಸಮುದಾಯದ ಹೆಣ್ಣುಗಳನ್ನು ತಮ್ಮ ಎಲ್ಲಾ ಆಸೆಗಳಿಗೆ ಬಳಸಿಕೊಳ್ಳಲಾಗಿದೆ. ಈ ಎಲ್ಲಾ ಅಂಶಗಳಿಂದ ಈ ವಿಷಯವನ್ನು ಅಧ್ಯಯನ ಮಾಡುತ್ತಿದ್ದೇನೆ.

ಇಪ್ಪತ್ತನೆಯ ಶತಮಾನ ಅನೇಕ ಬದಲಾವಣೆಗಳಿಗೆ ಪ್ರೇರಣೆಯಾಗಿದೆ. ಸಮಾನತೆಯ ಕೂಗನ್ನ ಕಂಡಂತಹ ಕಾಲವಿದು. ಇದಕ್ಕೆ ಬೇರೆ ಬೇರೆ ಕಾರಣಗಳಿವೆ. ದಲಿತ ಸಮುದಾಯಕ್ಕೆ ಸಿಕ್ಕ ಶಿಕ್ಷಣ ಅದರ ಫಲದಿಂದ ಬೇರೆ ಬೇರೆ ಸಾಹಿತ್ಯಗಳ ಅಧ್ಯಯನ ಪ್ರಾರಂಭವಾಗಿ ಅವುಗಳ ಪ್ರಭಾವದಿಂದ ಪ್ರೇರಣೆ ಪಡೆದು ಈ ನಾಡಿನಲ್ಲಿ ಹೊಸ ಸಿದ್ಧಾಂತಗಳು, ಹೋರಾಟಗಳು ಸೃಷ್ಟಿಯಾದವು.

ದಲಿತ ಬರಹಗಳು ಕೇವಲ ವೈಚಾರಿಕ ನೆಲಗಟ್ಟಿನಿಂದಲೇ ಬಂದವುಗಳಲ್ಲ. ಅವುಗಳ ಹಿಂದೆ ಅನುಭವದ ವ್ಯಾಪ್ತಿ ಇದೆ. ನೋವಿನ ಕೂಗು ಅಭಿವ್ಯಕ್ತಿಸಿರುವ ಸೃಜನಶೀಲ ಶಕ್ತಿ ಇರುವುದನ್ನು ನೋಡಬಹುದಾಗಿದೆ. ಹುಸಿ ಚರಿತ್ರೆಗಳನ್ನು ಕಟ್ಟಿ ಅವುಗಳನ್ನೇ ಸತ್ಯ ಎಂದು ನಂಬಿಸಿದ್ದ ಮಾರ್ಗಗಳಿಗೆ ಚಾಲೇಂಜ್ ಆಗಿ ಕೆಲಸ ಶುರುವಾಗಿದ್ದು ಇಪ್ಪತ್ತನೆ ಶತಮಾನದಲ್ಲಿ. ಅಂದರೆ ಹಿಂದೆ ನಡೆದಿಲ್ಲ ಎಂದರ್ಥವಲ್ಲ. ಹನ್ನೆರಡನೆ ಶತಮಾನದ ವಚನಕಾರರು ಮತ್ತು ಕನಕದಾಸರಂಥವರೂ ಮೂಲಭೂತ ವ್ಯವಸ್ಥೆಯನ್ನು ಮೊದಲಿನಿಂದಲೂ ವಿರೋಧಿಸಿದ್ದಾರೆ. ಆದರೆ ಒಂದು ಶಿಸ್ತುಬದ್ಧವಾಗಿ ಪ್ರಾರಂಭವಾಗಿದ್ದು ಇಪ್ಪತ್ತನೇ ಶತಮಾನದಲ್ಲಿ ಎಂದರೆ ತಪ್ಪಾಗಲಾರದು.

ಆದ್ದರಿಂದಲೇ ದಲಿತ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ದಾರಿಯನ್ನು ಕಂಡುಕೊಳ್ಳುವಲ್ಲಿ ಯಶಸ್ವಿಯಾಗಿದ್ದು.

ಈ ರೀತಿಯ ಪೋಷಕ ಅಂಶಗಳ ನೆರವಿನಿಂದ ಕನ್ನಡ ದಲಿತ ಆತ್ಮಕಥೆಗಳ ರಚನೆಯಾಗಲು ಕಾರಣವಾಗಿದೆ. ಈ ಆತ್ಮಕಥೆಗಳು ಬೇರೆ ಆತ್ಮಕಥೆಗಳಿಗಿಂತ ಭಿನ್ನವಾಗಿರುತ್ತವೆ. ಓದುತ್ತಿರುವಾಗ ಮನಸ್ಸನ್ನು ಕೊರೆಯುವಂತಹ ಅನುಭವವಾಗಿರುತ್ತದೆ. ಒಂದು ಕಡೆ ಆಸಕ್ತಿ ಮತ್ತೊಂದು ಕಡೆ ಆತಂಕಗಳನ್ನು ಹುಟ್ಟಿಸುತ್ತದೆ.

ಆರ್ಥಿಕ ಸಮಸ್ಯೆಗಳಿಂದಾಗಿ ಕದಿಯುವುದು ಶವಗಳ ಹಿಂದೆ ಹೋಗಿ ಪುಡಿಕಾಸುಗಳನ್ನು ಕೂಡಿಸಿಕೊಳ್ಳುವುದು ಹೊಟ್ಟೆಗಿಲ್ಲದೆ ಉಪವಾಸ ಮಲಗುವುದು ನಡೆಯುತ್ತಿರುತ್ತದೆ. ಧಾರ್ಮಿಕವಾಗಿ ತಮ್ಮದೇ ಕೇರಿಯಲ್ಲಿ ಸೃಷ್ಟಿಸಿಕೊಂಡ ಯಾವುದೋ ಮಾರಿಗೋ ಮಸಣಗೋ ಮರೆಹೋಗುವುದು ರೂಢಿಯಲ್ಲಿ ಇರುತ್ತದೆ. ಒಟ್ಟಾರೆಯಾಗಿ ಮೇಲು ವರ್ಗಗಳಿಗಿಂತ ದಲಿತರು ದೂರ ನಿಲ್ಲುತ್ತಾರೆ. ಸಾಮಾಜಿಕವಾಗಿಯಂತೂ ಊರ ಒಳಗೆ ಬರದಂತೆ ಊರಿಂದಾಚೆ ಕೇರಿಯಲ್ಲಿ ಬದುಕಬೇಕಾಗುತ್ತದೆ. ಕುಡಿಯುವ ನೀರಿನ ವ್ಯವಸ್ಥೆ, ನಡೆಯುವ ದಾರಿ, ತಿನ್ನುವ ಊಟ ಎಲ್ಲವೂ ಕೂಡ ಬೇರೆಯಾಗಿರುತ್ತದೆ. ರಾಜಕೀಯವಾಗಿ ಇವರನ್ನು ದುಡ್ಡಿಗೂ ಕೊಂಡುಕೊಳ್ಳುವ ಕ್ರಿಯೆಗಳು ಇಂದು ಮಾಮೂಲಾಗಿದೆ.

ಈ ಆತ್ಮಕಥೆಗಳಲ್ಲಿ ಕಂಡುಬರುವ ಹೆಣ್ಣುಗಳ ಬದುಕು ಆತ್ಮಕಥೆಗಳಿಗೆ ಒಮ್ಮೊಮ್ಮೆ ಹೊಸ ತಿರುವುಗಳನ್ನು ಕೊಡುತ್ತಿರುತ್ತವೆ. ಹೊಸ ಹೊಸ ಕುತೂಹಲಗಳನ್ನು ಹುಟ್ಟಿಸುತ್ತಿರುತ್ತವೆ. ಆದುದರಿಂದಲೇ ಅನೇಕ ಕಾದಂಬರಿಗಳಿಗೆ ಮೂಲವಾಗಬಹುದಾದ ಆತ್ಮಕಥೆಗಳ ಹೆಣ್ಣನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವಂತಹ ಆಯ್ಕೆಮಾಡಲಾಗಿದೆ.

## ಅಧ್ಯಾಯ ಎರಡು
# ಗೌರ್ವೆಂಟ್ ಬ್ರಾಹ್ಮಣದಲ್ಲಿ ಹೆಣ್ಣು

ಅರವಿಂದ ಮಾಲಗತ್ತಿಯವರ ಆತ್ಮಕಥೆಯಾದ ಗೌರ್ವೆಂಟ್ ಬ್ರಾಹ್ಮಣದಲ್ಲಿ ಬರುವ ಹೆಣ್ಣುಗಳು ದಲಿತ ಸಮುದಾಯ ಒಂದರಲ್ಲಿ ಬರುವ ರೀತಿಯಲ್ಲೆ ಬರುತ್ತಿರುತ್ತವೆ. ಮಾಲಗತ್ತಿಯವರ ಜೀವನ ಪ್ರಾರಂಭವಾಗುವುದೇ 'ಆಯಿ'ಯಿಂದ ತನ್ನ ಕೃತಿಯನ್ನು ತನ್ನ ಅಜ್ಜಿಗೆ ಅರ್ಪಿಸುತ್ತ ಆತ್ಮಕಥೆಯನ್ನು ಮುಂದುವರಿಸಿದ್ದಾರೆ. ಸದಾಕಾಲ ತನ್ನ ಮೊಮ್ಮಕ್ಕಳನ್ನು ಕೋಳಿಯಂತೆ ಹಿಂಡುಕಟ್ಟಿಕೊಂಡು ಬೆಳೆಸಿದ ತನ್ನ ಅಜ್ಜಿಯ ಬದುಕುಗಳು ಭಿನ್ನಭಿನ್ನವಾಗಿ ಮೂಡಿ ಬಂದಿರುವುದನ್ನ ಗುರುತಿಸಬಹುದಾಗಿದೆ. ಆ ಅಜ್ಜಿ ಒಂದು ಹೆಣ್ಣಾಗಿ ಮಾಡುವ ಕೆಲಸಗಳು ಮಾತ್ರ ಬಹಳ ಮೌಲ್ಯಯುತವಾಗಿರುವಂತಹವು.

ಗೌರ್ವೆಂಟ್ ಬ್ರಾಹ್ಮಣ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಒಂದು ದಲಿತ ಆತ್ಮಕಥೆಯಾಗಿ ಬಂದಿರುವ ಮೊದಲ ಕೃತಿ.

ವೇದನೆಗಳನ್ನು ತುಂಬಿಕೊಂಡಿರುವ ಒಬ್ಬ ಗಂಭೀರ ಚಿಂತಕರಾಗಿ ಅರವಿಂದರವರು ವಿಶಿಷ್ಟವಾಗಿ ನಿಲ್ಲುತ್ತಾರೆ. ತನ್ನ ಅನುಭವಗಳನ್ನು ಹೇಳಿಕೊಂಡು ಇಡೀ ತನ್ನ ಸಮುದಾಯದ ಬದುಕನ್ನು ಸಮಾಜದ ಮುಂದಿಟ್ಟಿರುವುದು ಈ ಕೃತಿಯ ವಿಶೇಷವಾಗಿದೆ.

## ಧಾರ್ಮಿಕವಾಗಿ ಹೆಣ್ಣು

ಸಂಪ್ರದಾಯದ ಹೆಸರಿನಲ್ಲಿ ದಲಿತ ಸಮುದಾಯದ ಹೆಣ್ಣುಗಳು ದಲಿತೇತರಿಗೆ ಪೂರಕವಾಗಿ ತಮ್ಮ ಧಾರ್ಮಿಕ ಆಚರಣೆಗಳನ್ನು ನಡೆಸುತ್ತಿರುತ್ತವೆ, ಇದಕ್ಕೆ ಉದಾಹರಣೆಗೆ ಈ ಕೃತಿಯಲ್ಲಿ ಕಂಡು ಬರುವ 'ಓಕುಳಿ' ಎಂಬ ಈಸ್ಟ್‌ಮನ್ ಕಲರ್ ಚಿತ್ರಭಾಗದಲ್ಲಿ ಕಾಣಬಹುದಾಗಿದೆ.

ಲೇಖಕರ ಕೇರಿಯ ಹೆಂಗಸರಿಗೆ ಶ್ರಾವಣ ಮಾಸದ ಓಕುಳಿ ಎಂದರೆ ಕೆಲವರಿಗೆ ಬಲು ಹಿಗ್ಗು-ಕುಗ್ಗು. ಸುತ್ತಮುತ್ತಲಿನ ಊರುಗಳಲ್ಲಿ ಬಿದರು ಕೂದಿಯ ಓಕುಳಿ ಎಂದರೆ ಪ್ರಸಿದ್ಧವಾದದ್ದು. ಈ ಸಂಪ್ರದಾಯದಲ್ಲಿ ಪಾಲುಗೊಳ್ಳುವವರು ಲೇಖಕರ ಕೇರಿಯ ಹೆಂಗಸರೇ ಆಗಿದ್ದರು.

ಸಂಪ್ರದಾಯದ ನಡುವಳಿ ಹೀಗಿದೆ. ದಲಿತ ಹೆಂಗಸರು ಕುಪ್ಪಸವನ್ನು ಕಳೆದು ಅಂಡುಗಚ್ಚೆ ಹಾಕಿದ ಸೀರೆಯುನ್ನು ಉಟ್ಟಿರಬೇಕು. ಅಂದರೆ ನಡು ಭಾಗಕ್ಕೆ ಮಾತ್ರ ಸೀರೆ ಸುತ್ತಿದ್ದು ಸೆರಗು ತಲೆಮೇಲೆ ಬಂದಿರುತ್ತದೆ. ಇವರ ಕೈಯಲ್ಲಿ ನೀಳವಾದ ಮಾರುದ್ದದ ಲಕ್ಕಿಯ ಹತ್ತಾರು ಜಬರಿಗಳಿರುತ್ತವೆ. ಇದರ ವಿರುದ್ಧ ಇನ್ನೊಂದು ಬಣ, ಇದರಲ್ಲಿ ದಲಿತೇತರ ಹಾಗೂ ಬ್ರಾಹ್ಮಣೇತರರದಿಂದ ಕೂಡಿದ ಗಂಡಸರು ಮಾತ್ರ ಇರುತ್ತಿದ್ದು ಅಂಡಗಚ್ಚೆ ಹಾಕಿದ ಧೋತಿಯನ್ನು ಉಟ್ಟಿರುತ್ತಾರೆ. ಕೈಯಲ್ಲಿ ರ್‍ಯಾಳದಿಂದ ಅಥವಾ ಸೆರೆಯಿಂದ ಲೇಪಿತವಾದ ಜೋಳಿಗೆ ಇರುತ್ತದೆ. ಈ ಗಂಡಸರಲ್ಲಿ ಸಾಮಾನ್ಯವಾಗಿ ಊರ ಪ್ರಮುಖ ಪುಂಡರೇ ಹೆಚ್ಚು. ದೇವಾಲಯದ ಎದುರಿರುವ ಹೊಂಡಗಳ ಸುತ್ತಮುತ್ತ ಓಕುಳಿ ಕ್ರೀಡೆ ನಡೆಯುತ್ತಿರುತ್ತವೆ. ಗಂಡಸರು ಅರಿಸಿನ ಕುಂಕುಮಗಳಿಂದ ಕೂಡಿದ ಹೊಂಡದ ನೀರು ಜೋಳಿಗೆಯಲ್ಲಿ ತಂದು ಹೆಂಗಸರಿಗೆ ಹೊಡೆಯುತ್ತಾರೆ.

ಕೈಯಲ್ಲಿ ನೀಳವಾದ ಜಬರಿಯನ್ನು ಹಿಡಿದು ನಿಂತ ಹೆಂಗಸರು ಈ ನೀರಿನ ಹೊಡೆತದಿಂದ ತಪ್ಪಿಸಿಕೊಂಡು ಜಬರಿಯಿಂದ ಗಂಡುಗಳಿಗೆ ಹೊಡೆಯಬೇಕು. ಇದೊಂದು ಬಗೆಯ ಸಾಂಪ್ರದಾಯಿಕ ಕ್ರೀಡೆ.

ಗಂಡಸರು ಈ ಹೆಂಗಸರಿಗೆ ಜೋಳಿಗೆಯಲ್ಲಿ ನೀರು ತಂದು ಪದೇ ಪದೇ ಹೊಡೆದಾಗ ಮೈಯೆಲ್ಲಾ ಒದ್ದೆಯಾಗಿ ತಲೆಯ ಸೆರಗು ಜಾರಿ ನೆಲಕ್ಕೆ ಬಿದ್ದರೂ ಈ ಹೆಂಗಸರು ಅದರ ಪರಿವಿಲ್ಲದೆ ತಾವು ತಿಂದ ಪೆಟ್ಟಿಗೆ ಪ್ರತಿಯಗಿ ಅವರ ಬೆನ್ನು ಬಾರೆತ್ತಲು ಓಡುತ್ತಾರೆ. ಒದ್ದೆಯಾದ ಮೈ ತುಂಬಿದೆದೆ ತೊಡೆಗಳು ಎಲ್ಲವೂ ಬಿಚ್ಚಿಟ್ಟ ಗಂಟುಗಳು.

ಪ್ರತಿವರ್ಷ ಈ ಕ್ರೀಡೆ ನಡೆಯಲೇಬೇಕು ಎನ್ನುವ ನಿಯಮ ನಡೆಯದಿದ್ದರೆ ಊರಿಗೆ ಮಳೆ ಬರಲಾರದು. ಬೆಳೆಗೆ ರೋಗ ಬೀಳುತ್ತದೆ ಎನ್ನುವ ನಂಬಿಕೆಗಳಿವೆ. ಈ ನಂಬಿಕೆಗಳಿಗೆ ಹೆದರುವ ದಲಿತ ಹೆಂಗಸರು ಗಂಡಸರ ಮನರಂಜನೆಗೆ ಬಲಿಯಾಗುತ್ತಾರೆ.

ಈ ಘಟನೆಗಳು ಲೇಖಕರಿಗೆ ತಿಳಿಯಲು ಅವರ ಅಜ್ಜಿಯೇ ಕಾರಣಳಾಗಿದ್ದಾಳೆ. ಜಾತ್ರೆಯ ಸಮಯದಲ್ಲಿ ತನ್ನ ಮೊಮ್ಮಕ್ಕಳನ್ನ ಕರೆದುಕೊಂಡು ಹೋಗುತ್ತಿದ್ದಳು. ಜಾತ್ರೆಗೆ ಕರೆದುಕೊಂಡು ಹೋಗುತ್ತಿದ್ದುದು ಜಾತ್ರೆ ನೋಡುವುದಕ್ಕಲ್ಲ. ಬದಲಿಗೆ ಅಲ್ಲಿ ಸಿಗುವ ಊಟಕ್ಕಾಗಿ, ಈ ಸಂದರ್ಭದಲ್ಲಿ ಅಲ್ಲಿ ನಡೆಯುತ್ತಿದ್ದ ಹೆಣ್ಣು ಗಂಡುಗಳ ನಡುವಿನ ಮನರಂಜನೆಯನ್ನು ತೋರಿಸಲು ತನ್ನ ಹೆಗಲ ಮೇಲೆ ಲೇಖಕರನ್ನ ಕೂರಿಸಿಕೊಳ್ಳುತ್ತಿದ್ದಳು. ಆ ಅಜ್ಜಿಗೆ ಅಲ್ಲಿ ನಡೆಯುತ್ತಿರುವ ಘಟನೆಗಳು ಶೋಷಣೆಯಂತೆ ಕಾಣದೆ ಕೇವಲ ಮನರಂಜನೆಯಂತೆ ಕಾಣುತ್ತಿತ್ತು.

ಮಾಲಗತ್ತಿಯವರು ಈ ಮೇಲಿನ ಸಂಪ್ರದಾಯವನ್ನು ತನ್ನ ಗೆಳೆಯನ ಮುಂದೆ ಪ್ರಸ್ತಾಪ ಮಾಡಿದಾಗ, ಈ ಮಾತನ್ನು ಕೇಳಿದಂತಹ ಆ ವ್ಯಕ್ತಿ ಹೇಳುತ್ತಾನೆ. ಈ ಘಟನೆಗಿಂತಲೂ ಭೀಕರವಾದ ತನ್ನ ಊರಿನ ಪಕ್ಕದಲ್ಲಿ ನಡೆಯುವ ಘಟನೆಯನ್ನು ತಿಳಿಸುತ್ತಾರೆ. ಆ ಘಟನೆ ಯಾವ ರೀತಿಯದೆಂದರೆ ಗಂಡಾಗಲಿ, ಹೆಣ್ಣಾಗಲಿ ಮೈಮೇಲೆ ಬಟ್ಟೆ ಇರುವುದಿಲ್ಲ. ಗಂಡು ಹೆಣ್ಣು ಸೇರಿ ನೃತ್ಯ ಮಾಡುತ್ತಾರೆ. ಅನಂತರ ಪ್ರಮುಖವಾದ ಅಂಶವೆಂದರೆ ಗಂಡುಗಳ ಹೆಗಲ ಮೇಲೆ ಹೆಣ್ಣುಗಳು ಕುಳಿತುಕೊಂಡು ಬಾಳೆಹಣ್ಣನ್ನು ಸುಲಿದು ಗಂಡಿನ ಬಾಯಲ್ಲಿ ಇಡುವುದಕ್ಕಾಗಿ ಹೋಗುತ್ತಾಳೆ.

ಗಂಡು ಬಾಯಿಮುಂದಕ್ಕೆ ತಂದಾಗ ತಕ್ಷಣ ಅದನ್ನು ಅಲ್ಲಿಂದ ಸರಿಸಿಬಿಡುತ್ತಾಳೆ. ನಂತರ ತಾನು ಆ ಬಾಳೆಹಣ್ಣನ್ನು ತಿನ್ನದೆ ನೆಕ್ಕುತ್ತಾಳೆ. ಹೆಣ್ಣು

ನೆಕ್ಕಿದ ಬಾಳೆಹಣ್ಣನ್ನು ಈ ಮೇಲು ಜಾತಿಯ ಗಂಡು ಕಚ್ಚಿ ತಿನ್ನುತ್ತಾನೆ. ಇದು ಸಂಪ್ರದಾಯದಲ್ಲಿ ಪ್ರಧಾನವಾದದ್ದು. ಈ ಎರಡು ಘಟನೆಗಳಲ್ಲಿಯೂ ದಲಿತ ಪುರುಷನ ಪ್ರವೇಶ ಕಂಡು ಬರುವುದಿಲ್ಲ. ಕೇವಲ ದಲಿತ ಹೆಣ್ಣು ಮತ್ತು ಮೇಲುವರ್ಗದ ಗಂಡುಗಳು ಕಂಡುಬರುತ್ತಾರೆ. ಸಂಪ್ರದಾಯದ ಹೆಸರಿನಲ್ಲಿ ನಡೆಯುವ ಈ ಘಟನೆಯ ಹಿಂದೆ ಮೇಲು ವರ್ಗಗಳ ಸಂಚು ಯಾವ ರೀತಿಯಿದೆ ಎನ್ನುವುದು ಗಮನಿಸಬಹುದು. ಬಹುಶಃ ಇತಿಹಾಸವನ್ನ ನೋಡಿದರೆ ಈ ರೀತಿಯ ಅನೇಕ ಘಟನೆಗಳು ಬೇರೆ ಬೇರೆ ರೀತಿಯಲ್ಲಿ ನಡೆಯುತ್ತಿರುತ್ತವೆ. ಧಾರ್ಮಿಕ ಹೆಸರಿನಲ್ಲಿ ಬೆತ್ತಲೆ ಸೇವೆ, ದೇವದಾಸಿಯ ಪದ್ಧತಿ ಕಾಣಬಹುದು. ದೇವಾಲಯಗಳಲ್ಲಿ ಮಹಿಳೆಯರಿಗೆ ಮುಕ್ತ ವ್ಯವಸ್ಥೆ ಇಲ್ಲದಿದ್ದರೂ ಈ ರೀತಿಯಲ್ಲಿ ಧಾರ್ಮಿಕ ಕ್ಷೇತ್ರದಲ್ಲಿ ಹೆಣ್ಣನ್ನು ತೊಡಗಿಸಿಕೊಳ್ಳುವಂತೆ ಮಾಡಲಾಗಿದೆ. ಈ ರೀತಿಯ ಪದ್ಧತಿಯಲ್ಲಿ ಮೇಲುಜಾತಿಯ ಹೆಣ್ಣುಗಳನ್ನು ನೋಡಲು ಸಾಧ್ಯವಿಲ್ಲ. ಧಾರ್ಮಿಕತೆಯ ಹೆಸರಿನಲ್ಲಿ ಮೇಲುವರ್ಗದ ಪುಂಡರಿಗೆ ಎಂತಹ ಹಬ್ಬ ಎನ್ನುವುದನ್ನು ಇಲ್ಲಿ ಕಾಣಬಹುದಾಗಿದೆ. ಹೆಣ್ಣು ಮಾತ್ರ ಅಸಹಾಯಕಳಾಗಿ ಈ ಮೇಲುವರ್ಗದ ಸಮಾಜಕ್ಕೆ ಬಲಿಯಾಗಿರುತ್ತಾಳೆ. ಮೇಲುವರ್ಗ / ಜಾತಿಯ ಗಂಡಸರು ಕೊಡುವ ಸೀರೆ ಕುಪ್ಪಸ ಈ ದಲಿತ ಹೆಣ್ಣಿನ ಮನಸ್ಸಿನಲ್ಲಿ ಈ ರೀತಿಯ ಸಣ್ಣ ಆಸೆಗಾಗಿ ಪುರುಷನ ಪ್ರತಿಷ್ಠೆಯ ಮುಂದೆ ಬಲಿಯಾಗುತ್ತಾಳೆ. ಇಂತಹ ಸಂದರ್ಭದಲ್ಲಿ ಮೇಲುವರ್ಗದ ಪುರುಷರು ಏಕೆ ತಮ್ಮ ಮಡದಿಯರನ್ನು ಆ ಸ್ಥಿತಿಯಲ್ಲಿ ನೋಡಲು ಬಯಸುವುದಿಲ್ಲವೆನ್ನುವುದೇ ಇಲ್ಲಿನ ಸತ್ಯ.

ಯಾವುದೇ ಸಮುದಾಯವಾಗಿರಬಹುದು ಆ ಸಮುದಾಯದ ಮನೆಯ ಒಳಗೆ ಹೆಣ್ಣು ಧಾರ್ಮಿಕವಾಗಿ ತುಂಬಾ ನಿಷ್ಠಳಾಗಿರುತ್ತಾಳೆ. ಹೊರಗಿನ ಸಮಾಜದಲ್ಲಿ ಇವಳ ನಿಷ್ಠೆ ಇರಲು ಸಾಧ್ಯವಿಲ್ಲ. ಮನೆಯಲ್ಲಿ ಧಾರ್ಮಿಕ ವಿಷಯದಲ್ಲಿ ಹೆಣ್ಣು ಸಣ್ಣ ಮಟ್ಟಿಗಿನ ಮುಕ್ತ ವ್ಯವಸ್ಥೆ ಇರುವುದರಿಂದಲೇ ಅವಳು ಅಲ್ಲಿ ತನ್ನ ನಿಷ್ಠೆಯನ್ನು ಅತಿ ಎಚ್ಚರಿಕೆಯಿಂದ ಕಾಪಾಡಿಕೊಂಡಿರುತ್ತಾಳೆ. ಅದೇ ರೀತಿ 'ಜನಿವಾರ ಶಿವದಾರ'ಗಳ ಮಹಿಮೆ ಭಾಗದಲ್ಲಿ ಈ ರೀತಿಯಲ್ಲಿ ವರ್ಣಿತಗೊಂಡಿದೆ. ಮಾಲಗತ್ತಿಯವರ ಕುಟುಂಬದವರು ಸ್ವಾತಂತ್ರ್ಯದ ಸಮಯದಲ್ಲಿ ವೀರಶೈವ ಮತಕ್ಕೆ ಮತಾಂತರವಾಗಿದ್ದರು. ಆದುದರಿಂದ ಅನೇಕ ರೀತಿಯ ಲಿಂಗಗಳು ಅವರ ಮನೆಯಲ್ಲಿ ಸಂಗ್ರಹಣೆಯಾಗಿದ್ದವು. ಕೆಲವರು ಆ ಲಿಂಗಗಳನ್ನು

ಕೊರಳಲ್ಲಿ ಧರಿಸಿದ್ದರು. ಅರವಿಂದರ ಅಜ್ಜ ಮತ್ತು ತಾಯಿ ಲಿಂಗುವಿನ ಸುತ್ತ ಎದ್ದು ನಿಂತ ಸಂದರ್ಭಗಳನ್ನು ಕತೆ ಮಾಡಿ ಹೇಳುತ್ತಾರೆ. ಲಿಂಗ ದೀಕ್ಷೆಯನ್ನು ಕೊಡುವಾಗ ಸೇಂದಿ, ದಾರು ಕುಡಿಯುಬಾರದು. ಮಾಂಸ ತಿನ್ನಬಾರದು. ಮುಂದಾಗಿ ಭಾಷೆ ತೆಗೆದುಕೊಂಡಿದ್ದರಂತೆ. ಇದನ್ನು ನಿಭಾಯಿಸಲಾಗಿದೆ. ಕೆಲವರು ಲಿಂಗವನ್ನು ತೆಗೆದುಬಿಟ್ಟರಂತೆ. ಲೇಖಕರ ತಾಯಿ ಮೊದಲ ಹೆರಿಗೆ ಸಂದರ್ಭದಲ್ಲಿ ಅಷ್ಟೆ ಕಟ್ಟುನಿಟ್ಟಾದ ಶರಣಿ, ಹೆರಿಗೆಯಾದಾಗ ಪೌಷ್ಠಿಕ ಆಹಾರದ ಕೊರತೆ ಕೇವಲ ರೊಟ್ಟಿ ಬೇಳೆ ತಿಂದು ಮತ್ತೆ ಶಕ್ತಿ ಸಂಪಾದಿಸಲು ಕಷ್ಟವೆನಿಸತೊಡಗಿತು. ಮಗುವಿನ ಆರೋಗ್ಯಕ್ಕಾಗಿ ಇನ್ನುಳಿದವರ ಒತ್ತಾಯ ಸಲಹೆಗೆ ಮಣಿದು ಮಾಂಸ ತಿಂದಳು. ಆಗ ಹೆರಿಗೆಯಾಗಿ ಇಪ್ಪತ್ತು ದಿನದ ಮರುದಿನವೇ ಮೊಲೆಹಾಲು ನಿಂತುಹೋದವು. ಮಾಂಸ ತಿನ್ನುವಾಗಲೆ ಲೇಖಕರ ತಾಯಿಯ ಮನದಲ್ಲಿ ಅಪರಾಧಿ ಪ್ರಜ್ಞೆ ಮೂಡಿತ್ತು. ಮೊಲೆಹಾಲು ನಿಂತ ಮೇಲೆ ಅದು ಇನ್ನೂ ಹೆಚ್ಚಾಯಿತು. ಮಾಂಸ ಘೋರ ಅಪರಾಧವೆನಿಸಿತು. ಮತ್ತೆ ಐಯ್ಯನವರಿಗೆ ಕೇಳಿದಾಗ ಕನಿಷ್ಠ ಪಕ್ಷ ಸೋಮವಾರ ದಿನವಾದರೂ ಮಾಂಸ ತಿನ್ನದೇ ಶುಚಿಯಾಗಿದ್ದು ಪೂಜೆ ಮಾಡಲೇಬೇಕೆಂದು ಹೇಳಿದರಂತೆ. ಈ ರಿಯಾಯ್ತಿ ನಡವಳಿಕೆಯಿಂದಲೇ ಎರಡನೇ ಮಗುವಿಗೆ ಸಂಪೂರ್ಣ ಮೊಲೆಹಾಲು ಕೊಡಲು ಸಾಧ್ಯವಾಯಿತು ಎನ್ನುವುದು ಲೇಖಕರ ತಾಯಿಯ ನಂಬಿಕೆ. ಹೀಗಾಗಿ ಲೇಖಕರ ತಾಯಿಯು ತಲೆಗೂದಲು ಬೆಳ್ಳಗಾಗಿ ಮೊಮ್ಮಕ್ಕಳನ್ನು ಕಂಡರೂ ಸೋಮವಾರ ದಿನದ ಉಪವಾಸದ ವ್ರತ ಇನ್ನೂ ಬಿಟ್ಟಿಲ್ಲ. ಲಿಂಗುವಿನ ವಿಚಾರದಲ್ಲಿ ಸಾಯುವವರೆಗೆ ಚಾಚೂ ತಪ್ಪದೆ ನಡೆದುಕೊಂಡಳು. ಲೇಖಕರ ಚಿಕ್ಕಜ್ಜಿ ಎಲ್ಲವನ್ನೂ ತ್ಯಜಿಸಿ ಸಾತ್ವಿಕಳಂತೆ ತೋರಿಸಿದಳು. ಎಷ್ಟೊಂದು ಭಯ ಭಕ್ತಿ ಆ ಲೋಹದ ಲಿಂಗುವಿನ ಮೇಲೆ. ಧಾರ್ಮಿಕ ವಿಚಾರಗಳೇ ಹೀಗೆ. ಒಮ್ಮೆ ತಲೆಯಲ್ಲಿ ಅಂಟಿಕೊಂಡರೆ ಕೊನೆತನಕ ನಾಶವಾಗಲಾರವು.

ಲೇಖಕರ ಚಿಕ್ಕ ಅಜ್ಜಿಯನ್ನು ಕುರಿತು ''ನೀನು ನಮ್ಮ ಜಾತ್ಯಾಗ ತಪ್ಪಿ ಹುಟ್ಟಿದಿ.

ನೀನು ಬ್ರಾಹ್ಮಣರ ಮನ್ಯಾಗ ಹುಟ್ಟಬೇಕಾಗಿತ್ತು ಎಂದು ನೆರೆಮನೆಯವರು ಹೇಳಿದ್ದರಂತೆ. ಬದುಕಿದರೆ ಬದುಕಬೇಕು. ಚನ್ನಮಲ್ಲಪ್ಪನಾಂಗ ಎಂದು ಐಯ್ಯನವರು ಮಾತಿನಲ್ಲಿಯೇ ಪ್ರಶಸ್ತಿಯನ್ನು ಕೊಟ್ಟಿದ್ದರಂತೆ.''

ಈ ಸಂದರ್ಭಗಳನ್ನು ಗುರುತಿಸಿದರೆ ತಿಳಿಯುತ್ತದೆ ಎಂ. ಎಸ್. ಶ್ರೀನಿವಾಸರವರು ಹೇಳಿದ 'ಸಂಸ್ಕೃತೀಕರಣದ'[1] ಕಲ್ಪನೆ ಎಷ್ಟು ಮುಖ್ಯವಾಗಿರುತ್ತದೆ ಎನ್ನುವುದು. ಇದೇ ಸಮಯದಲ್ಲಿ ಗಂಡಸರೂ ಕೂಡ ದೀಕ್ಷೆ ಪಡೆದಿದ್ದರೂ ತಮಗೆ ಅರಿವಿಲ್ಲದೆ ಅಥವಾ ನಿಷ್ಠೆಯನ್ನು ಪಾಲಿಸಲಾಗದೆ ತಮ್ಮ ದೀಕ್ಷೆಯನ್ನು ಕೈಬಿಟ್ಟಿರುತ್ತಾರೆ. ಆದರೆ ಒಂದು ಹೆಣ್ಣು ಮಾತ್ರ ಆ ದೀಕ್ಷೆಯ ಸುತ್ತ ಕತೆಗಳನ್ನು ಕಟ್ಟಿಕೊಂಡು ಮುಂದಿನ ತಲೆಮಾರುಗಳಿಗೆ ಸಾಗಿಸುತ್ತಿರುತ್ತಾಳೆ. ಅದೇ ಪವಿತ್ರವಾದುದು ಎಂದು ತಿಳಿದಿರುತ್ತಾಳೆ. ಆ ದೀಕ್ಷೆಯ ನಿಯಮಗಳಿಗೆ ಚ್ಯುತಿ ಬಂದರೆ ಪಾಪ ಭೀತಿಯಲ್ಲಿ ನರಳುತ್ತಿರುತ್ತಾಳೆ. ಅದಕ್ಕೆ ಬೇರೆಯದೇ ಆದಂತ ಪರ್ಯಾಯ ದಾರಿಯನ್ನ ಕಂಡುಕೊಳ್ಳುತ್ತಾಳೆ. ಆದರೆ ಇಲ್ಲಿ ಗಮನಿಸಬೇಕಾಗಿರುವ ಅಂಶವೆಂದರೆ ಪ್ರತಿಯೊಂದು ಜಾತಿಯ ಪುರುಷ ಮತ್ತು ಮಹಿಳೆಯರು ತಮ್ಮ ಜಾತಿ ಪವಿತ್ರವಾದದ್ದು ಎಂದು ತೃಪ್ತಿಪಡುತ್ತಿರುತ್ತಾರೆ. ಅದನ್ನ ಸಮಾಜದಲ್ಲಿ ತೋರಿಸಿಕೊಳ್ಳಲು ಪ್ರಯತ್ನಿಸುತ್ತಿರುತ್ತಾರೆ. ಈ ಕಾರಣದಿಂದಲೇ ಇಂದು ಅನೇಕ ಹಬ್ಬಗಳನ್ನು ಸಮಾಜದ ಎಲ್ಲಾ ಜಾತಿಯವರು ತಾರತಮ್ಯವಿಲ್ಲದೆ ನಡೆಸುತ್ತಿರುತ್ತಾರೆ. ಕೇವಲ ಮೇಲುವರ್ಗದವರಿಗೆ ಸೀಮಿತವಾಗಿದ್ದ ಸತ್ಯನಾರಾಯಣ ಪೂಜೆ ಇಂದು ತಳ ಸಮುದಾಯಕ್ಕೂ ಚಾಚಿಕೊಂಡಿದೆ. ತಳ ಸಮುದಾಯದ ಜನರು ಈ ರೀತಿಯ ಅನೇಕ ಧಾರ್ಮಿಕ ನಿಯಮಗಳನ್ನ ಚಾಚು ತಪ್ಪದೆ ಪಾಲಿಸಿಕೊಂಡು ಮೇಲು ಜಾತಿಯನ್ನು ಅನುಸರಿಸುತ್ತಿರುತ್ತಾರೆ.

ಇದೇ ಸಂದರ್ಭದಲ್ಲಿ ಅರವಿಂದರವರ ಧಾರ್ಮಿಕ ಬದುಕು ಮಾತ್ರ ಬೇರೆಡೆಗೆ ಸಾಗಿರುವುದನ್ನ ಕಾಣುತ್ತೇವೆ. ಅವರು ರಾಘವೇಂದ್ರನ ಕಡೆ ನಿಲ್ಲುತ್ತಾರೆ. ಅಂದರೆ ಅದೇ ನಿಲುವುಗಳು ಮುಂದುವರೆದಿವೆ ಎಂದರ್ಥವಲ್ಲ.

---

1 ಚ.ನ. ಶಂಕರ ರಾವ್ (೨೦೦೫) ಭಾರತೀಯ ಸಮಾಜ, ಜೈಭಾರತ್ ಪ್ರಕಾಶನ, ಮಂಗಳೂರು, ಎಂ. ಎಸ್. ಶ್ರೀನಿವಾಸರ ವಿಚಾರಗಳು

ಒಬ್ಬ ವ್ಯಕ್ತಿಗೆ ಶಿಕ್ಷಣ ದೊರೆತಾಗ ಯಾವ ರೀತಿಯಲ್ಲಿ ಬೇರೊಂದು ಪ್ರಪಂಚದ ಕಡೆ ಮುಖ ಮಾಡುತ್ತಿರುತ್ತಾನೆ ಎನ್ನುವುದನ್ನ ಗುರುತಿಸಬಹುದಾಗಿದೆ.

ಇಂದು ಒಂದು ದಲಿತ ಮನೆಯಲ್ಲಿ ಸತ್ಯನಾರಾಯಣ ಪೂಜೆ ನಡೆಯುತ್ತಿದೆ ಎಂದರೆ ಆ ಮನೆಯಲ್ಲಿ ಓದುಬರಹ ಬರುವ ಜನರು ಇರುವುದನ್ನ ಗಮನಿಸಬಹುದು.

ಈ ಮೇಲಿನ ರೀತಿಯಲ್ಲಿ ಅರವಿಂದ ಮಾಲಗತ್ತಿಯುವರ ಗೌರ್ವೆಂಟ್ ಬ್ರಾಹ್ಮಣ ಕೃತಿಯಲ್ಲಿ ಧಾರ್ಮಿಕ ಬದುಕುಗಳು ಕಾಣಿಸಿಕೊಳ್ಳುತ್ತವೆ. ಯಾವುದೇ ದಲಿತ ವ್ಯಕ್ತಿ ಇಲ್ಲಿ ಧಾರ್ಮಿಕ ನಾಯಕ / ಕಿರಿಯರಾಗಿರುವುದಿಲ್ಲ. ಬೇರೆ ಯಾರದೋ ನಾಯಕತ್ವಕ್ಕೆ ಪೂರಕವಾಗಿರುತ್ತಾರೆ. ತಮ್ಮ ಕೇರಿ ಇರುವ ಊರಿನಲ್ಲಿ ನಡೆಯುವ ಮದುವೆ, ತಿಥಿಗಳಲ್ಲಿ ಗಂಟೆಗಟ್ಟಲೆ ಕಾದು ಕುಳಿತು ಊರ ಜನರ ಊಟವಾದ ನಂತರ ಇವರ ಊಟವಾಗಬೇಕಿತ್ತು. ಆದರೆ ಆ ಎಲ್ಲಾ ಧಾರ್ಮಿಕ ಕಾರ್ಯಗಳಿಗೆ ಎಲ್ಲಾ ತಯಾರಿ ಕೆಲಸಗಳಿಗೆ ಮೊದಲು ದಲಿತರು ಬೇಕಾಗಿರುತ್ತಾರೆ. ಅವರಿಲ್ಲದೆ ಯಾವುದೇ ರೀತಿಯ ಮದುವೆ, ತಿಥಿ ಮತ್ತಾವುದೇ ಧಾರ್ಮಿಕ ಕಾರ್ಯ ಪೂರ್ಣವಾಗದು.

ಈ ರೀತಿಯ ಬದುಕು ಕೇವಲ ಒಂದು ಕೇರಿಗೆ ಸೀಮಿತವಾಗಿರುವಂತಹದಲ್ಲ. ಬದಲಾಗಿ ಈ ರೀತಿಯ ತಾರತಮ್ಯ ಬದುಕು ಎಲ್ಲಾ ಕೇರಿಯಲ್ಲಿಯೂ ಹರಡಿಕೊಂಡಿರುವಂತಹದು.

ವರ್ಷಕ್ಕೊಮ್ಮೆನೋ, ಮೂರು ವರ್ಷಕ್ಕೊಮ್ಮೆನೋ ಮಾರಿಹಬ್ಬ ಮಾಡಿ ದಲಿತರಿಗೆ ಮಾಂಸದ ಊಟ ಬಡಿಸಿ ವರ್ಷ ಪೂರ್ತಿ ಅವರುಗಳಿಂದ ದುಡಿಸಿಕೊಳ್ಳುವ ಹುನ್ನಾರ ಮೇಲುಜಾತಿಯವರಿಗೆ ರೂಢಿಯಾಗಿ ಬಂದಿರುವ ಪದ್ಧತಿಯಾಗಿದೆ. ಈ ರೀತಿಯ ಬದುಕನ್ನೇ ಗೌರ್ವೆಂಟ್ ಬ್ರಾಹ್ಮಣದಲ್ಲಿ ಕಾಣಬಹುದಾಗಿದೆ.

## ಸಾಮಾಜಿಕವಾಗಿ ಹೆಣ್ಣು

ಗೌರ್ಮೆಂಟ್ ಬ್ರಾಹ್ಮಣ ಕೃತಿಯಲ್ಲಿ ಹೆಣ್ಣಿನ ಸಾಮಾಜಿಕ ಬದುಕು, ಗ್ರಾಮೀಣ ದಲಿತ ಹೆಣ್ಣುಗಳ ಬದುಕಿನಂತೆಯೆ ನೈಜತೆಯಿಂದ ಚಿತ್ರಿತವಾಗಿದೆ. ಈ ಕೃತಿ ಪ್ರಾರಂಭವಾಗುವುದೆ 'ಹೆಣದ ಮೇಲಿನ ದುಡ್ಡು ಮತ್ತು ಮದುವೆಯ ಊಟ' ಎನ್ನುವ ಪ್ರಸಂಗಗಳಿಂದ.

ಎಲ್ಲಾ ಗ್ರಾಮಗಳಂತೆ ಲೇಖಕರ ಗ್ರಾಮವೂ ಸಹ ಎಲ್ಲಾ ರೀತಿಯ ಜಾತಿಗಳನ್ನು ಒಳಗೊಂಡಿರುತ್ತದೆ. ಸಹಜವಾಗಿಯೇ ಒಂದು ಹಳ್ಳಿಯಲ್ಲಿ ಇರುವ ಲಕ್ಷಣಗಳು ಇಲ್ಲಿಯೂ ಇರುತ್ತವೆ. ಅವುಗಳೆಂದರೆ, ಶ್ರೀಮಂತ ಕುಟುಂಬ-ಕುಟುಂಬಗಳ ನಡುವಿನ ಸ್ಪರ್ಧೆ. ಈ ಶ್ರೀಮಂತಿಕೆಗೆ ಹೆಸರಾದ ಮೂರು ಕುಟುಂಬಗಳಾದ ಶೇತಜೀರವರದು, ಮರಾಠಿಗರದು ಮತ್ತು ವೀರಶೈವರದು. ಈ ಮೂರು ಮನೆತನಗಳ ನಡುವೆ ಸದಾ ಕಾಲ ಒಂದಲ್ಲಾ ಒಂದು ರೀತಿಯ ಪೈಪೋಟಿ ದೇಣಿಗೆ ಕೊಡುವಲ್ಲಿ, ಮನೆ ಕಟ್ಟಿಸುವಲ್ಲಿ ಯಾರಾದರೂ ಸತ್ತರೆ ಇಲ್ಲವೆ ಯಾರಾದರೂ ಹುಟ್ಟಿದರೆ ಅವರ ಶ್ರೀಮಂತಿಕೆಯ ಮಟ್ಟ ಎಲ್ಲರಿಗೂ ಗೋಚರಿಸುತ್ತಿತ್ತು. ಆದುದರಿಂದ ಶ್ರೀಮಂತರ ಮನೆಯಲ್ಲಿ ಯಾರು ಸತ್ತರೂ ಕೆಳ ಜಾತಿಯವರಿಗೆ ಸಂತೋಷವೇ ಆಗುತ್ತಿತ್ತು. ಯಾರಾದರೂ ಸತ್ತರೆ ಹೆಣದ ಮೇಲೆ ಹಣ ತೂರುವುದೊಂದು ಸಂಪ್ರದಾಯ ಮೊದಲಿನಿಂದಲೂ ಸಾಗಿಬಂದಿರುತ್ತದೆ. ಈ ಸಂಪ್ರದಾಯ ಶ್ರೀಮಂತರಿಗೆ ಪ್ರತಿಷ್ಠೆಯ ಹೆಗ್ಗುರುತು ಆಗಿರುತ್ತದೆ. ಅಲ್ಲದೆ ಶ್ರೀಮಂತತನದ ಪ್ರದರ್ಶನಕ್ಕೆ ಅವಕಾಶ ಕೂಡ ದೊರೆತಿರುತ್ತದೆ. ಈ ರೀತಿ ಅವಕಾಶಗಳನ್ನೆ ನಿರೀಕ್ಷಿಸುತ್ತಿದ್ದ ಲೇಖಕರ ಅಜ್ಜಿ ಯಾವುದಾದರೊಂದು ಮೂಲದಿಂದ ಈ ರೀತಿಯ ಆದಾಯ ಬರುವ ಮೂಲವನ್ನು ತಿಳಿದುಕೊಂಡು ತಮ್ಮ ಮೊಮ್ಮಕ್ಕಳಿಗೆ ತಿಳಿಸುತ್ತಿದ್ದಳು. ಅಜ್ಜಿ ಹೇಳಿದ ಆದಾಯದ ಮೂಲವನ್ನು ಕೇಳಿದ ಕೂಡಲೇ ಅಲ್ಲಿಗೆ ಸವಾರಿ ಸಾಗುತ್ತಿತ್ತು. ದಲಿತರು ಬಂದಿರುವ ವಿಷಯವನ್ನು ಖಚಿತ ಮಾಡಿಸಿಕೊಂಡೆ ಹೆಣವನ್ನು ಮೇಲಕ್ಕೆ ಎತ್ತುತ್ತಿದ್ದರು. ಹೆಣದ ಮೇಲೆ ಅವರು ತೂರಿರುವ ಹಣ ನೆಲಕ್ಕೆ ಬಿದ್ದ ಮೇಲೆ ಕಚ್ಚಾಡಿ ಎತ್ತಿಕೊಳ್ಳುವುದು ದಲಿತರ ಕೆಲಸ. ಇಲ್ಲಿ ದಲಿತರು ಇಲ್ಲದೆ ಹೋದರೆ ಅವರು ತೂರುವ ಹಣಕ್ಕೆ ಯಾವ ಬೆಲೆಯೂ

ಇರುತ್ತಿರಲಿಲ್ಲ. ತೂರುವ ಹಣ ಬಾಚಿಕೊಳ್ಳುವುದಕ್ಕಾಗಿ ದಲಿತ–ದಲಿತರ ನಡುವೆಯೆ ಜಗಳಗಳಾಗುತ್ತಿದ್ದವು.

ಈ ಮೇಲಿನ ಅಂಶಗಳು ಕೇವಲ ಲೇಖಕರ ಹಳ್ಳಿಗೆ ಮಾತ್ರ ಸೀಮಿತವಾಗಿರದೆ ಎಲ್ಲಾ ದಲಿತ ಕೇರಿಗಳಲ್ಲಿಯೂ ಕಾಣಬಹುದಾಗಿದೆ. ದಲಿತರಲ್ಲಿ ಇತ್ತೀಚೆಗೆ ಮತ್ತೊಂದು ರೀತಿಯ ಬದಲಾವಣೆ ಕಂಡು ಬರುತ್ತಿದೆ. ದಲಿತ ಕೇರಿಯಲ್ಲಿ ದಲಿತ ವ್ಯಕ್ತಿಯೇ ಸತ್ತರೆ ಆ ಹೆಣದ ಮೇಲೆ ಹಣ ತೂರುವ ಪದ್ಧತಿ ಪ್ರಾರಂಭವಾಗಿದೆ. ಎಲ್ಲಾ ದಲಿತ ಕುಟುಂಬದಲ್ಲಿ ಈ ಪದ್ಧತಿಯಿಲ್ಲ. ಆರ್ಥಿಕವಾಗಿ ಸುಧಾರಿಸಿಕೊಂಡಿರುವ ಕುಟುಂಬದಲ್ಲಿ ಮಾತ್ರ ಕಂಡು ಬರುತ್ತದೆ. ಪುನಃ ಅಲ್ಲಿ ಆ ಹಣವನ್ನು ಎತ್ತಿಕೊಳ್ಳುವರು ಅದೇ ಕೇರಿಯ ದಲಿತರೇ ಆಗಿರುತ್ತಾರೆ.

ಈ ಬದಲಾವಣೆಯನ್ನು ಗ್ರಹಿಸಿದರೆ ತಿಳಿಯುತ್ತದೆ ಶ್ರೀಮಂತಿಕೆಯ ಪ್ರದರ್ಶನ ಕೇವಲ ಮೇಲು ಜಾತಿಗಳಿಗೆ ಮಾತ್ರ ಸೀಮಿತವಾಗಿರದೆ ಎಲ್ಲಾ ಜಾತಿಗಳಲ್ಲಿಯೂ ಆ ಗುಣಗಳು ಕಾಣಿಸಿಕೊಳ್ಳುತ್ತಿರುತ್ತವೆ. ಆರ್ಥಿಕವಾಗಿ ಮುಂದುವರಿದ ದಲಿತ ಕುಟುಂಬಗಳಿಂದಲೇ ಇಂದು ಬಡತನದ ದಲಿತರು ಸಮಸ್ಯೆಗಳಿಗೆ ತುತ್ತಾಗಿರುತ್ತಾರೆ. ಬ್ರಾಹ್ಮಣ್ಯ ಎನ್ನುವಂತದ್ದು ಕೇವಲ ಬ್ರಾಹ್ಮಣ ಜಾತಿಗೆ ಸೀಮಿತವಾಗಿರದೆ ಎಲ್ಲಾ ಜಾತಿಯಲ್ಲಿಯೂ ಬ್ರಾಹ್ಮಣ್ಯ ತುಂಬಿಕೊಂಡಿರುತ್ತದೆ. ಅದೇ ರೀತಿ ಎಲ್ಲಾ ಬ್ರಾಹ್ಮಣ ಜಾತಿಯ ಕುಟುಂಬಗಳು ಬ್ರಾಹ್ಮಣ್ಯವನ್ನು ಆಚರಿಸುತ್ತಿವೆ ಎಂದು ಹೇಳುವುದೂ ಕೂಡ ತಪ್ಪಾಗುತ್ತದೆ. ಆದುದರಿಂದಲೇ ಇಂದು ಎಲ್ಲಾ ರೀತಿಯ ಸಾಮಾಜಿಕ ನೀತಿ ನಿಯಮಗಳು ಮಿಶ್ರಿತವಾಗಿವೆ.

ಜಾತ್ರೆ, ಮದುವೆ ಈ ಸಂದರ್ಭಗಳಲ್ಲಿ ಸಿಗುವ ಊಟಕ್ಕೆ ಹಾಜರಾಗುವುದರಲ್ಲಿ ದಲಿತರ ಬದುಕು ವಿಶೇಷವಾದುದು. ಈ ಊರಿನ ಜನಕ್ಕೆ ಊಟ ಹಾಕ್ತಾರಂತೆ ಎನ್ನುವ ವಿಷಯ ಗೊತ್ತಾದ ಕೂಡಲೆ ಹೆಚ್ಚು ಸಂತೋಷಪಡುವವರೆಂದರೆ ದಲಿತರೆ. ನುಚ್ಚು ರೊಟ್ಟಿ, ಅನ್ನ, ಸಾರು ಎಂದರೂ ದಲಿತರಿಗೆ ಹಬ್ಬದ ಊಟವೆ ಆಗಿರುತ್ತಿತ್ತು. ಇಂತಹ ಸಂದರ್ಭದಲ್ಲಿ ಬೂಂದಿ,

ಮೈಸೂರು ಪಾಕ್ ಊಟದ ವಿಷಯ ತಿಳಿದಾಗ ಅವರಿಗೆ ಸಂತೋಷ ಆಗದಿರಲು ಸಾಧ್ಯವೇ ?

ಶೇಠಜಿಯವರ ಮಗಳ ಮದುವೆಗೆ ಊರಿನ ಸುತ್ತಮುತ್ತಲಿನ ದಲಿತರೂ ಕೇವಲ ಊಟಕ್ಕಾಗಿ ಬಂದಿದ್ದರು. ಹೀಗಾಗಿ ದಲಿತರ ಸಂಖ್ಯೆ ಅಂದು ಹೆಚ್ಚೇ ಆಗಿಬಿಟ್ಟಿತು. ಶೇಠಜಿಯವರ ಅಡ್ಡೆ(ವಠಾರ) ತುಂಬಾ ದೊಡ್ಡದು. ಅದಕ್ಕೆ ಎರಡು ಗೇಟು. ಒಂದು ಹಿಂದಿದ್ದರೆ ಮತ್ತೊಂದು ಮುಂದಿತ್ತು. ಮುಂದಿನ ಗೇಟಿನಲ್ಲಿ ದಲಿತರಿಗೆ ಪ್ರವೇಶವಿರಲಿಲ್ಲ. ಲೇಖಕರ ಅಜ್ಜಿ ಸ್ವಲ್ಪ ಬಾಯಿಬಡಕಿ. ಶಕ್ತಿವಾನಳು ಕೂಡ. ಮೊಮ್ಮಕ್ಕಳನ್ನೆಲ್ಲ ಕೋಳಿಯಂತೆ ಕರೆಯುತ್ತಾ ಎಳೆದೆಳೆದು ರೆಕ್ಕೆಯಲ್ಲಿಟ್ಟುಕೊಂಡಂತೆ ಪಕ್ಕದಲ್ಲಿಯೇ ಇಟ್ಟುಕೊಳ್ಳುತ್ತಿದ್ದಳು.

ಕೆಲವೊಮ್ಮೆ ಆರ್ಥಿಕವಾಗಿ ಮುಂದಿರುವ ಜಾತಿಗಳು ಸಾಮಾಜಿಕವಾಗಿ ಮುಂದಿರುವ ಜಾತಿಗಳಿಗಿಂತ ಮೇಲುಮಟ್ಟದಲ್ಲಿ ಇರುತ್ತವೆ. ಹೆಣದ ಮೇಲಿನ ದುಡ್ಡು ಎನ್ನುವ ಪ್ರಸಂಗವನ್ನು ಗಮನಿಸಿದಾಗ ಶೇಠಜಿಯವರ ಮನೆಯಲ್ಲಿ ವೀರಶೈವರೆ ಕೈಯಲ್ಲಿ ಕೋಲು ಹಿಡಿದು ನಿಂತು ದಲಿತರನ್ನು ಕಾಯುವ ಕೆಲಸ ಮಾಡುತ್ತಿರುತ್ತಾರೆ. ಅದೇ ರೀತಿ ಒಕ್ಕಲಿಗರ ಮನೆಯಲ್ಲಿ ದಲಿತರೂ ಕೂಡ ಇದೇ ಕೆಲಸ ಮಾಡುತ್ತ ದಲಿತ ಜನರನ್ನೆ ನಿಯಂತ್ರಿಸುತ್ತಿರುತ್ತಾರೆ.

ಶೇಠಜಿಯವರ ದೃಷ್ಟಿಯಲ್ಲಿ ನೋಡಿದರೆ ವೀರಶೈವರು ದಲಿತರು ಎನಿಸಿಬಿಡುತ್ತಾರೆ. ದಲಿತರಲ್ಲೆ ಅವರಿಗಿಂತ ಕೆಳಗಿರುವವರನ್ನ ಕೀಳಾಗಿ ನೋಡುವುದನ್ನು ಕಾಣಬಹುದಾಗಿದೆ. ಈ ರೀತಿಯ ದೌರ್ಜನ್ಯದ ಗುಣವನ್ನು ನೋಡುತ್ತಾ ಸಾಗಿದರೆ ಎಲ್ಲರಲ್ಲೂ ದಲಿತ ಗುಣಗಳನ್ನ ಗುರುತಿಸಬಹುದಾಗಿದೆ. ಈ ಕೃತಿಯಲ್ಲೆ ಗುರುತಿಸಬಹುದಾಗಿದೆ. ಲೇಖಕರಿಗಿಂತಲೂ ಕೀಳಾದ ಇನ್ನೊಂದು ತಂಡವು ಅಲ್ಲಿತ್ತು. ಹೀಗಾಗಿ ಅವರಿಗೆ ಲೇಖಕರ ಸಮುದಾಯಕ್ಕಿಂತಲೂ ಕೊನೆಗೆ ಊಟ. ಅವರಲ್ಲಿ ಅಡ್ಡಿ, ಚೊಂಚರು, ಲೋಲ್ಯಾರು, ಕುಂಟಕೊರವರು ಇರುತ್ತಿದ್ದರು. ಅವರನ್ನು ಕಂಡು ಇವರು ಹೇಸುತ್ತಿದ್ದರು. ಇವರು ಬೇಡಿ ತಿನ್ನುವುದನ್ನೇ ವೃತ್ತಿಯನ್ನಾಗಿ ಮಾಡಿಕೊಂಡವರು.

ಈ ಮೇಲಿನ ಸಾಲುಗಳನ್ನ ಗಮನಿಸಿದರೆ ದಲಿತತ್ವ ಹೇಗೆ ದಲಿತರಲ್ಲೂ ಕೂಡ ಆಚರಣೆಯಲ್ಲಿ ಇರುತ್ತದೆ ಎನ್ನುವುದನ್ನ ಗುರುತಿಸಬಹುದು. ಎಲ್ಲರಲ್ಲಿಯೂ ಬ್ರಾಹ್ಮಣತ್ವ ಇರುವಂತೆಯೆ ಎಲ್ಲರಲ್ಲಿಯೂ ದಲಿತತ್ವ ಸುಪ್ತವಾಗಿ ಅವಿತುಕೊಂಡಿರುತ್ತದೆ.

ಮೇಲುಜಾತಿಯ ಮನೆಗಳಿಗೆ ಕೆಳಜಾತಿಯವರು ಊಟಕ್ಕೆ ಹೋದರೆ ಕೆಲವು ನಿಯಮಕ್ಕೆ ಅನುಸಾರವಾಗಿ ನಡೆದುಕೊಳ್ಳಬೇಕಾಗಿರುತ್ತದೆ. ಆ ನಿಯಮಗಳನ್ನ ದಲಿತರಿಗೆ ಹೇಳಿಯೇ ಒಳಗೆ ಬಿಡುತ್ತಿದ್ದರು.

ಆ ರೀತಿಯ ನಿಯಮಗಳೆಂದರೆ,

* “ತಟ್ಟೆಗೆ ಹೆಚ್ಚಿಗೆ ಹಾಕಿಸಿಕೊಳ್ಳಬಾರದು
* ನಿಮಗೆ ತಿನ್ನಲು ಎಷ್ಟು ಸಾಧ್ಯವೋ ಅಷ್ಟನ್ನು ಮಾತ್ರ ನೀಡಿಸಿಕೊಳ್ಳಬೇಕು.
* ಮನೆಗೆ ಕಟ್ಟಿಕೊಂಡು ಹೋಗಬಾರದು
* ಊಟ ಮುಗಿಸಿ ಹೋಗುವಾಗ ಪಾತ್ರೆಯಲ್ಲಿಟ್ಟ ಬಣ್ಣದಲ್ಲಿ ಕೈ ಅದ್ದಿ ಹೋಗಬೇಕು.”

ಈ ರೀತಿಯ ಯಾವುದೇ ನಿಯಮಗಳು ಮೇಲು ಜಾತಿಯವರಿಗೆ ಅನ್ವಯಿಸುವುದಿಲ್ಲ. ಮೇಲುಜಾತಿಯವರು ಮಾಡುವ ನಿಯಮಗಳಿಗೇನೂ ದಲಿತರು ಬೆಲೆ ಕೊಡುವಂತಹವರಲ್ಲ. ಈ ದಲಿತರು ಆ ರೀತಿಯ ನಿಯಮಗಳನ್ನು ಮುರಿಯುವುದರಲ್ಲಿ ತುಂಬಾ ನಿಸ್ಸೀಮರು. ಬಣ್ಣದಲ್ಲಿ ಕೈ ಅದ್ದುವ ಸಂದರ್ಭ ಬಂದಾಗ ಅದರಿಂದ ತಪ್ಪಿಸಿಕೊಳ್ಳಲು ಬೇರೆ ಬೇರೆ ದಾರಿಗಳನ್ನ ಹುಡುಕುತ್ತಿದ್ದರು. ಅದರಲ್ಲಿಯೂ ಈ ಲೇಖಕರ ಅಜ್ಜಿ ಈ ವಿಷಯದಲ್ಲಿ ಎಲ್ಲರಿಗೂ ಮಾರ್ಗದರ್ಶಕಳಾಗಿದ್ದಳು. ಅಪರೂಪಕ್ಕೆ ಎಣ್ಣೆ ಕಾಣುವ ತಲೆ ಅಂದು ಆವಶ್ಯಕವಾಗಿ ಎಣ್ಣೆ ಕಾಣುತ್ತಿತ್ತು. ಊಟವಾದ ನಂತರ ಬಣ್ಣವಿಟ್ಟಿದ ಪಾತ್ರೆಗೆ ಕೈ ಅದ್ದಿಹೋಗುವ ಮುನ್ನ ಕೈಯನ್ನು ತನ್ನ ತಲೆಗೆ ಚೆನ್ನಾಗಿ ತಿಕ್ಕಿಕೊಂಡು

ನಂತರ ಕೈಯನ್ನು ಬಣ್ಣದಲ್ಲಿ ಅದ್ದಿ ಆಚೆ ಬಂದು ಆ ಕೈಯನ್ನ ತಮ್ಮ ಬಟ್ಟೆಗಳಿಗೆ ಒರಸಿಕೊಂಡಾಗ ಬಣ್ಣ ಹೊರಟು ಹೋಗುತ್ತಿತ್ತು. ಆ ನಂತರ ಮತ್ತೊಮ್ಮೆ ಊಟಕ್ಕೆ ಹಾಜರಾಗುತ್ತಿದ್ದರು.

ಕಾವಲು ಕಾಯುವಂತ ಜನ ಎಷ್ಟೇ ಎಚ್ಚರಿಕೆಯಿಂದ ಇದ್ದರೂ ಅವರೆಲ್ಲರಿಗೂ ಚಳ್ಳೇಹಣ್ಣು ತಿನ್ನಿಸಿ ಅಜ್ಜಿ ಊಟವನ್ನು ಹೊರಕ್ಕೆ ತರುತ್ತಿದ್ದಳು. ತನ್ನ ಮೊಮ್ಮಕ್ಕಳ ತಲೆಯ ಮೇಲಿರುವ ಟೋಪಿಯ ಅಡಿಯಲ್ಲೂ ಅಡಗಿಸಿಟ್ಟಿರುತ್ತಿದ್ದಳು. ಕಾವಲುಗಾರನ ಕೈಗೆ ಸಿಕ್ಕಾಗ ಒಂದಲ್ಲಾ ಒಂದು ರೀತಿಯಲ್ಲಿ ನೆಪ ಹೇಳಿ ತಾನು ಉಟ್ಟಿದ್ದ ಸೀರೆಯಲ್ಲೇ ಊಟ ತರುತ್ತಿದ್ದಳು. ಗೇಟು ದಾಟಿ ಹೊರಗೆ ಬಂದಾಗ ಅಜ್ಜಿಯ ಮುಖದಲ್ಲಿ ನಾನು ಗೆದ್ದೆ ಎನ್ನುವ ನಗುವಿರುತ್ತಿತ್ತು. ಈ ರೀತಿಯಲ್ಲಿ ಶ್ರೀಮಂತ ಮನೆಯ ಊಟ ದಲಿತರ ಮನೆ ಸೇರುತ್ತಿತ್ತು.

ಎಲ್ಲಾ ವಿದ್ಯಾರ್ಥಿಗಳು ಹಾಸು ಹಲಗೆಯ ಮೇಲೆ ಕುಳಿತುಕೊಂಡಿರುವಾಗ ತಾನು ಬರೀ ನೆಲದ ಮೇಲೆ ಕುಳಿತುಕೊಳ್ಳಲು ಬಯಸದೇ ಶಾಲೆಗೆ ಹೋಗುವುದಿಲ್ಲ ಎಂದು ಹಟ ಮಾಡಿದಾಗ ಲೇಖಕರ ಅಜ್ಜಿಯೆ ಸಮಾಧಾನ ಮಾಡಿ ನಿನಗೆ ಹೊಸ ತಟ್ಟು (ಕತ್ತರಿಸಿದ ಸೆಣಬಿನ ಚೀಲ) ಕೊಡ್ತೀನಿ ತಗೊಂಡು ಹೋಗು ಎಂದು ಹೇಳಿದಳು. ಆ ಮಾತಿಗೆ ಒಪ್ಪಿ ಮರುದಿನ ತಟ್ಟು ತೆಗೆದುಕೊಂಡು ಹೋಗಿ ಹಾಸಿಕೊಂಡು ಕುಳಿತುಕೊಂಡಾಗ ಇದನ್ನು ಗಮನಿಸಿದ ಹಾಸು ಮಣೆಯ ಮೇಲೆ ಕುಳಿತಿದ್ದ ವಿದ್ಯಾರ್ಥಿಗಳು ಅಪಹಾಸ್ಯ ಮಾಡಿ ಚಪ್ಪಾಳೆ ತಟ್ಟಿ ನಗಲು ಪ್ರಾರಂಭಿಸಿದರು.

ಬಡತನದ ವ್ಯಕ್ತಿಗೆ ಯಾವುದು ಮುಖ್ಯವಾಗಿ ಕಾಣಿಸುತ್ತಿರುತ್ತದೆಯೋ ಅದೇ ವಸ್ತು ಶ್ರೀಮಂತರಿಗೆ ಅಮುಖ್ಯವಾಗಿರುತ್ತದೆ. ಆದರೆ ಅಜ್ಜಿ ಮಾತ್ರ ಯಾವುದೇ ಸಾಮಾಜಿಕ ಬದುಕುಗಳಿಗೆ ತಲೆ ಕೆಡಿಸಿಕೊಳ್ಳದೆ ತನ್ನ ಮೊಮ್ಮಗನ ಯಶಸ್ಸನ್ನೆ ಬಯಸುತ್ತಿರುತ್ತಾಳೆ. ಇದೇ ಆ ಹೆಣ್ಣಿನ ದೊಡ್ಡ ಗುಣವಾಗಿರುತ್ತದೆ. ದಲಿತ ಹೆಣ್ಣುಗಳ ಬದುಕು ಸಾಮಾಜಿಕವಾಗಿ ಹೇಗೆಲ್ಲ

ಚಾಚಿಕೊಂಡಿರುತ್ತವೆ ಎನ್ನುವುದನ್ನ 'ಕರಿಬೆಕ್ಕು ಬೆಳ್ಳಗಾಗಲಿಲ್ಲ' ಭಾಗದಲ್ಲಿ ಗುರುತಿಸಿಕೊಳ್ಳಬಹುದು.

ಬಟ್ಟೆ ತೊಳೆಯುವುದಕ್ಕಾಗಿ ನಡೆಯುವ ಹೋರಾಟ ಕೆಲವರಿಗೆ ಮಾತ್ರ ಸೀಮಿತವಾಗಿರದೆ ಎಲ್ಲಾ ವರ್ಗದ ಜನರಲ್ಲಿಯೂ ಚಾಚಿಕೊಂಡಿದೆ. ಬ್ರಾಹ್ಮಣರು ಬಟ್ಟೆ ತೊಳೆಯುವ ಜಾಗದಲ್ಲಿ ಶೂದ್ರರು ತೊಳೆಯುವಂತಿಲ್ಲ. ಶೂದ್ರರು ಬಟ್ಟೆ ತೊಳೆಯುವ ಜಾಗದಲ್ಲಿ ದಲಿತರು ಬಟ್ಟೆ ತೊಳೆಯುವಂತಿಲ್ಲ. ನೀರು ಹರಿಯುವ ಹಳ್ಳಿಗಳಲ್ಲಿ ಮೇಲುಭಾಗದಲ್ಲಿ ಮೇಲುಜಾತಿಯವರು ತೊಳೆಯಬೇಕು. ತಗ್ಗಿನ ಪ್ರದೇಶದಲ್ಲಿ ಕೆಳಜಾತಿಯವರು ಬಟ್ಟೆ ತೊಳೆಯಬೇಕಾಗುತ್ತದೆ. ಒಂದು ವೇಳೆ ಆ ಜಾಗಗಳೇನಾದರೂ ಅದಲು ಬದಲಾದರೆ ಹಳ್ಳಿಗೆ ಹಳ್ಳಿಯೇ ನಿಂತು ನೋಡುವಷ್ಟು ಕುರುಕ್ಷೇತ್ರ ನಡೆಯುತ್ತಿದ್ದವು.

ಆ ಊರ ದಲಿತ ಕೇರಿಯ ಜನ ಬಟ್ಟೆ ತೊಳೆಯುವುದಕ್ಕಾಗಿ ಹೋಗುವ ಸ್ಥಳಗಳು ಮೂರು. ಆ ಊರ ಕೆರೆಗೆ ಐದು ಕಡೆಗಳಲ್ಲಿ ಬಟ್ಟೆ ತೊಳೆಯುವ ಕಲ್ಲುಗಳನ್ನು ಹಾಕಲಾಗಿದೆ. ಒಂದೊಂದು ಭಾಗದ ಒಗೆ ಕಲ್ಲುಗಳಿಗೆ ಒಂದೊಂದು ಸಮಾಜದ ಗುತ್ತಿಗೆ ಹಿಡಿದಿದ್ದಂತಹ ಪದ್ಧತಿ. ಲೇಖಕರ ಕೇರಿಯ ಜನರಲ್ಲಿ ಲೇಖಕರ ಮನೆಯವರೇ ಮೊದಲ ಬಾರಿಗೆ ಊರ ಕೆರೆಯಲ್ಲಿ ಬಟ್ಟೆಯನ್ನು ತೊಳೆಯುವ ಸಾಹಸ ಮಾಡಿದವರು. ಈಗಲೂ ಕೆಳ ಜಾತಿಯ ಜನ ಅಲ್ಲಿಗೆ ಬಟ್ಟೆ ತೊಳೆಯಲು ಹೋಗುವುದಿಲ್ಲವೆಂದರೆ ನಿಮಗೆ ಆಶ್ಚರ್ಯವೆನಿಸಬಹುದು. ಆದರೆ ವಸ್ತು ಸ್ಥಿತಿ ಹಾಗೆ ಇದೆ.

ಲೇಖಕರ ಅವ್ವೆಯರು ಕೆರೆಗೆ ಬಟ್ಟೆ ತೊಳೆಯಲು ಒಟ್ಟಾಗಿ ಹೋಗುತ್ತಿದ್ದರು. ಜೊತೆಗೆ ಪಕ್ಕದ ಎರಡು ಮೂರು ಮನೆಯ ಹೆಂಗಸರನ್ನೂ ಕರೆದುಕೊಂಡು ಹೋಗುತ್ತಿದ್ದರು. ಒಂದು ರೀತಿಯಲ್ಲಿ ಇದು ಸೈನ್ಯ ಕಟ್ಟುವ ಪದ್ಧತಿ. ಯಾರಾದರೂ ಮೇಲುಜಾತಿಯ ಜನ ಒಬ್ಬರು ಕದನಕ್ಕೆ ಬಂದರೆ ಸಾಕು. ಕೇರಿಯ ಎಲ್ಲಾ ಬಾಯಿಗಳೂ ಒಂದು

ಗೂಡುತ್ತಿದ್ದವು.

ಜಾತಿಯ ಹೆಸರನ್ನು ಮುಂದಿರಿಸಿಕೊಂಡು ಜಗಳ ಮಾಡುತ್ತಿದ್ದವರೇನು ತೀರ ಮೇಲುಜಾತಿಯ ಜನರೇನಲ್ಲ. ಅವರೂ ಕೂಡ ಮಾಂಸ ತಿನ್ನುವವರೇ ಆಗಿರುತ್ತಿದ್ದರು.

ಕೆರೆಯಲ್ಲಿ ಬಟ್ಟೆ ತೊಳೆಯುವ ಕಾಯಕವನ್ನ ಮೊಟ್ಟಮೊದಲಿಗೆ ಪ್ರಾರಂಭಿಸಲು ಕಾರಣ ಲೇಖಕರರ ತಂದೆ ಮೇಷ್ಟ್ರಾಗಿದ್ದು ಸ್ವಲ್ಪ ಮಟ್ಟಿಗಾದರು ಆರ್ಥಿಕವಾಗಿ ಮುಂದಿದ್ದುದರಿಂದ ಈ ರೀತಿಯ ಕಾರ್ಯಗಳಿಗೆ ತಮ್ಮನ್ನು ತೊಡಗಿಸಿಕೊಳ್ಳುವಂತೆ ಮನಸ್ಸನ್ನು ಪ್ರೇರೇಪಿಸುತ್ತಿರುತ್ತದೆ. ಜೊತೆಗೆ ಗುಂಪುಗಳನ್ನು ಕಟ್ಟುವಷ್ಟು ಧೈರ್ಯ ಬಂದಿರುತ್ತದೆ. ಒಂದು ಕೇರಿಯಲ್ಲಿ ಯಾವ ಕುಟುಂಬ ಆರ್ಥಿಕವಾಗಿ ಮೇಲಿರುತ್ತದೊ ಅಂತಹ ಕುಟುಂಬಗಳ ಮಾತುಗಳನ್ನು ಉಳಿದ ಕುಟುಂಬಗಳು ಕೇಳಿಸಿಕೊಳ್ಳುತ್ತಿರುತ್ತವೆ. ಜೊತೆಗೆ ಆ ಮಾತುಗಳಿಗೆ ಬೆಲೆ ಕೊಡುತ್ತಿರುತ್ತವೆ. ಆದುದರಿಂದಲೇ ಇಂದು ಆರ್ಥಿಕವಾಗಿ ಮುಂದುವರಿದ ದಲಿತ ಕುಟುಂಬಗಳು ಉಳಿದ ದಲಿತ ಕುಟುಂಬಗಳಿಗೆ ಬಂಡವಾಳ ಶಾಹಿಗಳ ರೀತಿಯಲ್ಲೆ ಇರುತ್ತವೆ.

ಮುಂದುವರಿದಿರುವ ದಲಿತ ಕುಟುಂಬಗಳು ಅದೇ ಕೇರಿಯ ಬೇರೆ ಕುಟುಂಬಗಳನ್ನು ಮುಂದೆಬರಲು ಬಿಡುವುದಿಲ್ಲ. ಅವುಗಳನ್ನು ಮಟ್ಟ ಹಾಕುವುದಕ್ಕಾಗಿ ಸಂಚು ಮಾಡುತ್ತಿರುತ್ತವೆ. ಆದುದರಿಂದಲೇ ಹೊರಗಿನ ಸಂಘರ್ಷಕ್ಕಿಂತ ಒಳಗಿನ ಸಂಘರ್ಷಗಳು ಮನುಷ್ಯನನ್ನು ತತ್ತರಿಸುವಂತೆ ಮಾಡುತ್ತಿರುತ್ತವೆ.

ಇದೇ ಭಾಗದಲ್ಲಿ ಲೇಖಕರ ತಾಯಿ ತನ್ನ ಮಗನ ಬಣ್ಣವನ್ನು ನೋಡಿ ಬೇಸರ ಪಟ್ಟುಕೊಂಡು ಮುಖ ತೊಳೆಯುವೆನೆಂದು ಕರೆದು ಮೈಯಲ್ಲವನ್ನೂ ತೊಳೆದುಬಿಡುತ್ತಿದ್ದಳು. ಜೊತೆಗೆ ಒಂದು ಕಲ್ಲನ್ನು ತೆಗೆದು ತಿಕ್ಕಿ ತಿಕ್ಕಿ ತೊಳೆಯುವುದು ತನ್ನ ಮಗನ ಕಪ್ಪು ಬಣ್ಣ ಬದಲಾದರೆ ಸಾಕು ಎನ್ನುವ ಆಸೆ ಆ ತಾಯಿಗೆ. ಕಪ್ಪು ಬಣ್ಣ ಕೀಳು ಎನ್ನುವ ಮನಸ್ಸಿನ ಸ್ಥಿತಿಗಳು ಆಕೆಯಲ್ಲಿ ಹರಡಿಕೊಂಡಿರುತ್ತದೆ. ಬಿಳೀ ಬಣ್ಣ

ಹೆಚ್ಚು ಮಾನ್ಯತೆ ಪಡೆದಿದ್ದು ಈ ದೇಶಕ್ಕೆ ಬ್ರಿಟೀಷರು ಬಂದು ಭಾರತದ ಅಧಿಕಾರವನ್ನು ತಮ್ಮ ಕೈಗೆ ತೆಗೆದುಕೊಂಡು ಆಳ್ವಿಕೆ ಪ್ರಾರಂಭಿಸಿದ ನಂತರ ಅವರ ಬಣ್ಣ ಮತ್ತು ಭಾಷೆ ಶ್ರೇಷ್ಠವಾಗಿದ್ದನ್ನು ಗುರುತಿಸಬಹುದು. ಈ ಮನಸ್ಥಿತಿಯ ಫಲದಿಂದಲೇ ಕಪ್ಪಗಿರುವವರು ಬೆಳ್ಳಗಾಗಲು ಇಂದು ಅನೇಕ ದಾರಿಗಳೆ ಹುಟ್ಟಿಕೊಂಡಿವೆ. ತರಾವರಿ ಸಾಬೂನು, ಮುಖಕ್ಕೆ ಹಚ್ಚುವ ಕ್ರೀಮುಗಳು ಹುಟ್ಟಿಕೊಳ್ಳುವುದರ ಹಿಂದೆ ಬಿಳುಪನ್ನು ಕಾಪಾಡಿಕೊಳ್ಳುವುದೇ ಆಗಿರುತ್ತದೆ.

ಮನುಷ್ಯನ ಒಳಗೆ ತುಂಬಿಕೊಂಡಿರುವ ಜಾತಿಯ ಅಂಶಗಳು ಯಾವ ಯಾವ ರೀತಿಯಲ್ಲಿ ಕೆಲಸ ಮಾಡುತ್ತಿರುತ್ತವೆ ಎನ್ನುವುದನ್ನ ಮನುಷ್ಯನ ವರ್ತನೆಗಳಲ್ಲಿಯೆ ವ್ಯಕ್ತವಾಗುತ್ತಿರುತ್ತದೆ. 'ಹಂಡ್ಯಾನ ಲಾಳೆ ಕತ್ತರಿಸಿದ ಪ್ರಸಂಗ' ಭಾಗವನ್ನು ಓದಿದಾಗ ಮನುಷ್ಯ ಯಾಕೆ ಈ ರೀತಿಯ ಕ್ರೂರ ದಾರಿಗಳತ್ತ ಸಾಗಿರುತ್ತಾನೆ ಎನಿಸಿಬಿಡುತ್ತದೆ. ಪ್ರಕೃತಿ ಸಹಜವಾಗಿರುವಂತಹ ಹೆಣ್ಣು ಮತ್ತು ಗಂಡು ಪ್ರಾಣಿಗಳ ಸಂಬಂಧವನ್ನೆ ಕೊಲ್ಲುತ್ತಿರುತ್ತಾನೆ. ಈ ಸಂಬಂಧ ಕೂಡ ತನ್ನ ಶ್ರೀಮಂತಿಕೆಗೆ ಅಪಮಾನವೆಂದೇ ಭಾವಿಸುತ್ತಿರುತ್ತಾನೆ. ಇಲ್ಲವಾದರೆ ಆ ರೀತಿಯ ಕೃತ್ಯಗಳಿಗೆ ಕೈಹಾಕುತ್ತಿರಲಿಲ್ಲ. ಅಂದರೆ ದಲಿತರ ಮನೆಯ ಗಂಡು ನಾಯಿ ಸಾಹುಕಾರನ ಮನೆಯ ಹೆಣ್ಣು ನಾಯಿಗಳ ನಡುವೆ ನಡೆಯುತ್ತಿದ್ದ ಲೈಂಗಿಕ ಸಂಬಂಧವನ್ನ ನೋಡಿ ಸಹಿಸಿಕೊಳ್ಳಲಾಗದೆ ತನ್ನ ಕೈಯಲ್ಲಿದ್ದ ಕುಡುಗೋಲಿನಿಂದ ನಾಯಿಯ ಶಿಶ್ನವನ್ನು ಕೊಯ್ದು ನಾಯಿ ಸಾಯುವಂತೆ ಕಲ್ಲಿನಿಂದ ಹೊಡೆಯಬೇಕಾದರೆ ಅವರೊಳಗೆ ಜಾತಿಯ ವಿಷ ಎಷ್ಟರ ಮಟ್ಟಿಗೆ ಆವರಿಸಿಕೊಂಡಿರುತ್ತದೆ ಎನ್ನುವುದನ್ನು ಗ್ರಹಿಸಬಹುದಾಗಿದೆ. ಆ ಸಾಹುಕಾರರ ಹೆಣ್ಣು ನಾಯಿಯನ್ನು ಬೇರೆ ಎಲ್ಲಿಂದಲೊ ತಂದಿದ್ದಲ್ಲ. ಆ ಊರಿನ ದಲಿತ ಕೇರಿಯಿಂದಲೇ ತೆಗೆದುಕೊಂಡು ಹೋದದ್ದು.

ಮನುಷ್ಯನು ಯಾವ ಕಾರಣಕ್ಕಾಗಿ ಈ ರೀತಿ ನಡೆದುಕೊಳ್ಳುತ್ತಿರುತ್ತಾನೆ ಎಂದು ಪ್ರಶ್ನೆ ಕೇಳಿಕೊಂಡರೆ ಸಿಗುವ ಉತ್ತರ ಸಾಹುಕಾರನ ಜಾತಿಯನ್ನು ಸಾರುವುದಕ್ಕೆ ತನ್ನ ಜಾತಿಯ ಪವಿತ್ರತೆಯನ್ನು ಸಾರಿಕೊಳ್ಳುವುದಕ್ಕೆ ಮತ್ತೊಂದು ಜಾತಿಯನ್ನ ಅಪಮಾನಗೊಳಿಸಿ ಕೀಳು ಎಂದು ಹೇಳುವುದಕ್ಕೆ ಈ ರೀತಿಯ

ಮಾರ್ಗಗಳನ್ನ ಕಂಡುಕೊಳ್ಳುತ್ತಿರುತ್ತಾನೆ. ಪರೋಕ್ಷವಾಗಿ ತನ್ನ ಸರ್ವಾಧಿಕಾರದ ಗುಣಗಳನ್ನ ಪ್ರದರ್ಶಿಸುತ್ತ ಸಾಮಾನ್ಯ ಜನರಲ್ಲಿ ಭಯವನ್ನು ಉಂಟುಮಾಡುತ್ತಿರುತ್ತಾನೆ. ಈ ಮೇಲಿನ ವಿಷಯಕ್ಕೂ ಮುಂದೆ ಚರ್ಚಿಸುವ ವಿಷಯಕ್ಕೂ ಯಾವ ರೀತಿಯ ಸಂಬಂಧಗಳಿರುತ್ತವೆ ಎನ್ನುವುದನ್ನ ಗುರುತಿಸಿ ಲೇಖಕರೇ ಹೇಳುವಂತೆ ದಲಿತರ ಕೇರಿ ಸೂಳೆಯರ ಕೇರಿಯಾಗಿರುತ್ತಿತ್ತು. ಈ ಕೇರಿಗೆ ಬರುತ್ತಿದ್ದುದೆ ಸಾಹುಕಾರರು.

ಸೂಳೆಗೇರಿಯ ಚಿತ್ರಣವನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದರೆ, ಮನುಷ್ಯನ ಒಳಗಿರುವ ವ್ಯಂಗ್ಯ ಎಂತಹದೆಂದು ತಿಳಿಯುತ್ತದೆ. ಮೇಲುಜಾತಿಯವರ ನಾಯಿಯ ಮತ್ತು ಕೆಳಜಾತಿಯವರ ನಾಯಿಯ ನಡುವೆ ನಡೆದ ಸಂಬಂಧವನ್ನ ನೋಡಿ ಸಹಿಸಿಕೊಳ್ಳದ ಸಾಹುಕಾರರು ಈ ಕೆಳ ಜಾತಿಯ ಹೆಣ್ಣಿನೊಂದಿಗೆ ಕೂಡುವಾಗ ಪಾವಿತ್ರ್ಯತೆ ಎಲ್ಲಿ ಮರೆಯಾಗಿಬಿಡುತ್ತದೆ.

ಇಂದು ಸಮಾಜದಲ್ಲಿ ಸಹಸ್ರಾರು ನೋವುಗಳಿವೆ. ಅದರಲ್ಲಿಯೂ ಯುವ ಗಂಡು ಹೆಣ್ಣುಗಳು ಅನುಭವಿಸುತ್ತಿರುವ ನೋವುಗಳಿಂದಾಗಿ ಎಷ್ಟೋ ಜೀವಗಳು ನಾಶವಾಗುತ್ತಿವೆ. ಇನ್ನೂ ಅನೇಕ ಜೀವಗಳು ಹಿಂದಿನ ನೆನಪುಗಳ ಮೇಲೆ ಜೀವಿಸುತ್ತಿರುತ್ತವೆ.

ಈ ರೀತಿಯ ಸಮಸ್ಯೆಗೆ ಬಹಳ ಮುಖ್ಯ ಕಾರಣ ಜಾತಿ ಎನ್ನುವ ಅನಿಷ್ಟ. ಈ ಅನಿಷ್ಟದಿಂದಾಗಿ ಎಷ್ಟೋ ಒಲಿದ ಜೀವಿಗಳು ದೂರವಾಗಿ ಹೋಗುತ್ತವೆ.

ಈ ಲೇಖಕರೇ ಅನುಭವಿಸಿರುವ ನೋವಿಗೂ ಬಹಳ ಮುಖ್ಯ ಕಾರಣವಾಗಿದ್ದು ಕೂಡ ಜಾತಿಯೆ. ಯಾವ ರೀತಿ ಆ ಜಾತಿ ಮುಳ್ಳಾದ ರೀತಿಯನ್ನು 'ನನ್ನ ಮಾಜಿ ಪ್ರೇಯಸಿ' ಎನ್ನುವ ಭಾಗದಲ್ಲಿ ಗುರುತಿಸಬಹುದು. ಲೇಖಕರ ಬಾಳ ಸಂಗಾತಿಯ ಆಯ್ಕೆಯ ಸಂದರ್ಭದಲ್ಲಿ ಸೋಲಲು ಬಹಳ ಮುಖ್ಯವಾದ ಪಾತ್ರ ವಹಿಸಿದ್ದು ಜಾತಿ.

"ಅರವಿಂದ _ _ _ _ _

ನೀನು ಕೊನೆಯ ಪಕ್ಷ

ಲಿಂಗಾಯುತ ಜಾತಿಯಲ್ಲಾದರೂ ಹುಟ್ಟಬಾರದಿತ್ತೆ ?"

ಎಂದು ಕಣ್ಣೀರು ಸುರಿಸುತ್ತ ಕೇಳಿಕೊಳ್ಳುವಾಗ ಜಾತಿಯ ಬಗ್ಗೆ ಅವಳೊಳಗೆ ಹುಟ್ಟಿರುವ ಪ್ರಶ್ನೆಗೆ ಉತ್ತರವೇನು ? ಯಾರು ಆ ಹೊಣೆ ಹೊರುತ್ತಾರೆ.

ಆರು ವರ್ಷಗಳಿಗೂ ಹೆಚ್ಚು ಕಾಲ ಒಬ್ಬರನ್ನೊಬ್ಬರು ಬಿಟ್ಟಿರದೆ ಜೊತೆಯಲ್ಲಿದ್ದವರು. ವರ್ಷಗಳು ಕಳೆದ ಮೇಲೆ ಈ ಇಬ್ಬರ ನಡುವೆ ಅಂತರ ಬೆಳೆಯಲು ಪ್ರಾರಂಭವಾಗಲು ಕಾರಣವೇನು ? "ಮನೆಯವರು ಮದುವೆಗೆ ಒಪ್ಪದೇ ಹೋದರೂ ನಾವು ಕೊನೆವರೆಗೆ ಹೀಗೆ ಇದ್ದು ಬಿಡೋಣ. ಏನು ತಾಳಿ ಕಟ್ಟಿಕೊಂಡ್ರೇನೆ ಮದುವೇನಾ ?"

ಈ ರೀತಿಯ ಬಂಡಾಯುತನದಲ್ಲಿ ಮಾತನಾಡಿದ ಹೆಣ್ಣು ಯಾವುದೇ ಪ್ರವಾಸೀ ಸ್ಥಳಗಳಿಗೆ ಹೋದರೂ ಅಲ್ಲಿ ರೂಂ ಬುಕ್ ಮಾಡಿ ನಂತರ ಅರವಿಂದರವರನ್ನ ಕರೆಸಿಕೊಳ್ಳುತ್ತಿದ್ದ ಹೆಣ್ಣು ತನ್ನ ಪತ್ರಗಳಿಗೆ ಉತ್ತರ ಬರದಿದ್ದಾಗ ಊಟವನ್ನು ನಿರಾಕರಿಸಿ ಮಲಗಿದ್ದ ಹುಡುಗಿ ಕೊನೆಗೆ "_ _ _ ನೀನು ನನ್ನ ಮುಖ ನೋಡುವಲ್ಲಿ ನನ್ನ ತಂಗಿ ಮುಖ ನೋಡು. ನಾನು ಹೀಗೆ ಮಾಡಿದರೆ ನನ್ನ ಇಬ್ಬರು ತಂಗಿಯರ ಗತಿ ಏನು ? ಅವರನ್ನ ನಮ್ಮ ಜಾತಿಯಲ್ಲಿ ಯಾರು ಮದುವೆ ಆಗುತ್ತಾರೆ ? ನನ್ನ ತಾಯಿ ಹಾರ್ಟ್ ಪೇಷಂಟ್. ತಂದೆ ಹೇಗೆ ಅಂತ ನಿನಗೆ ಗೊತ್ತು."

ಈ ರೀತಿಯ ಸ್ಥಿತಿಗಳನ್ನ ಮುಂದಿಟ್ಟುಕೊಂಡು ದೂರವಾಗಿ ಬದುಕಲು ಕಾರಣ ಜಾತಿ ಎನ್ನುವುದು ಸ್ಪಷ್ಟವಾಗಿ ಕಾಣಿಸುತ್ತದೆ.

ಜಾತಿಯ ಕಾರಣಗಳಿಗಾಗಿಯೆ ಎಷ್ಟೋ ಜೀವಿಗಳು ಕೊನೆಯ ತನಕ ಮದುವೆಯಾಗದೆ ದೂರವಾಗದೆ ಬದುಕಿರುತ್ತಾರೆ ಅಂದ ಮಾತ್ರಕ್ಕೆ ಎರಡು ಭಿನ್ನ ಜಾತಿಯ ವ್ಯಕ್ತಿಗಳು ಒಂದಾಗಿರುವ ಸಂಖ್ಯೆಯಾದರು ಎಷ್ಟು ಎಂದು ಲೆಕ್ಕ ಮಾಡಿದರೆ ಸಿಗುವುದು ಬೆರಳೆಣಿಕೆಯಷ್ಟು ಮಾತ್ರ.

ಮನುಷ್ಯ-ಮನುಷ್ಯರ ನಡುವೆ ಗೋಡೆಗಳನ್ನು ಕಟ್ಟಿಕೊಂಡು ಬದುಕುತ್ತಿರುವಾಗ ಶಾಂತಿಯುತ ಸಮಾಜದ ಬಗ್ಗೆ ಕನಸು ಕಾಣುವುದೂ ಸಹ ಕಷ್ಟವಾಗುತ್ತದೆ.

**ಆರ್ಥಿಕವಾಗಿ ಹೆಣ್ಣು**

ಗೌರ್ಮೆಂಟ್ ಬ್ರಾಹ್ಮಣ ಕೃತಿಯ ಆರ್ಥಿಕ ಕ್ಷೇತ್ರದಲ್ಲಿ ಮಹಿಳೆ ಹೆಚ್ಚಾಗಿ ಕಂಡುಬರುವುದಿಲ್ಲ. ಆದರೆ 'ಹೆಣದ ಮೇಲಿನ ದುಡ್ಡು ಮತ್ತು ಮದುವೆ ಊಟ' - ಈ ಭಾಗವನ್ನು ಗಮನಿಸಿದರೆ ದಲಿತರ ಆರ್ಥಿಕ ಸ್ಥಿತಿಯಿಂದ ಯಾವ ರೀತಿಯಲ್ಲಿ ಬದುಕುಗಳನ್ನ ಆಯ್ಕೆಮಾಡಿಕೊಂಡಿರುತ್ತಾರೆ ಎನ್ನುವುದು ತಿಳಿಯುತ್ತದೆ. ಶ್ರೀಮಂತ ವರ್ಗದವರು ಪ್ರತಿಷ್ಠೆಯ ಸಂಕೇತದಂತೆ ತೂರುವ ಪುಡಿ ಕಾಸುಗಳನ್ನ ನೂಕುನುಗ್ಗಲುಗಳ ನಡುವೆ ಬಾಚಿಕೊಳ್ಳುವ ಸ್ಥಿತಿ ಕೇವಲ ದಲಿತರಿಗೆ ಮಾತ್ರ ಬಂದಿರಲು ಕಾರಣವೇನು ? ಎಂದು ಪ್ರಶ್ನಿಸಿಕೊಂಡಾಗ ಬಹುಶಃ ಬೇರೆ ಸಮೂಹಗಳಿಗಿಂತ ಹೆಚ್ಚು ಆರ್ಥಿಕ ನೋವುಗಳನ್ನ ಅನುಭವಿಸುವುದು ಈ ಸಮುದಾಯವೆ ಎನಿಸಿಬಿಡುತ್ತದೆ.

ಆರ್ಥಿಕವಾಗಿ ನೊಂದಷ್ಟು ಮನುಷ್ಯ ತನ್ನ ಘನತೆಗಳನ್ನ ಮರೆಯುತ್ತಿರುತ್ತಾನೆ. ಹೊಟ್ಟೆ ತುಂಬಿಸಿಕೊಳ್ಳಲು ಯಾವುದಾದರೂ ಸರಿ ಎನ್ನುವ ಹಂತಕ್ಕೆ ಬೇಕಾದರೂ ಸಾಗುತ್ತಾನೆ. ಇದರ ಫಲದಿಂದಲೆ ಸತ್ತ ಪ್ರಾಣಿಗಳ ಮಾಂಸವನ್ನ ತಿನ್ನುವುದು, ಮಲ ಮೂತ್ರಗಳನ್ನು ತಲೆಯ ಮೇಲೆ ಹೊರುವ ಕೆಲಸಕ್ಕೂ ಸಿದ್ಧನಾಗಿರುತ್ತಾನೆ.

ಮದುವೆ ಮನೆಯಲ್ಲಿ ದೊರೆಯುವ ಊಟಕ್ಕಾಗಿ ತಂತ್ರಗಳನ್ನು ಮಾಡುತ್ತಿರುತ್ತಾನೆ. ತಂತ್ರಗಳನ್ನು ಮಾಡುವಲ್ಲಿ ಹೆಣ್ಣು ಬಹಳ ಎಚ್ಚರಿಕೆಯನ್ನು

ವಹಿಸುತ್ತಿರುತ್ತಾಳೆ. ತನ್ನ ತಂತ್ರದಲ್ಲಿ ಜಯಗಳಿಸಿ ಮದುವೆ ಊಟದ ಮನೆಯಿಂದ ಹೊರಬಂದು ನಾನು ಗೆದ್ದೆ ಎನ್ನುವ ನಗುವನ್ನ ಚೆಲ್ಲುತ್ತಿರುತ್ತಾಳೆ.

ಈ ಕೃತಿಯನ್ನು ರಾಜಕೀಯ ಅಂಶಗಳನ್ನ ಮುಂದಿರಿಸಿಕೊಂಡು ಹೆಣ್ಣನ್ನು ನೋಡಿದರೆ ಅವಳ ಪಾತ್ರ ಕಂಡುಬರುವುದಿಲ್ಲ. ತೆರೆಯ ಮರೆಯಲ್ಲಿ ಇದ್ದುಕೊಂಡೇ ಬದುಕುತ್ತಿರುತ್ತಾಳೆ. ಭಾರತಕ್ಕೆ ಸ್ವಾತಂತ್ರ್ಯ ಬಂದಾಗಲೂ ಕೂಡ ಅವಳು ಅದರ ಅರ್ಥ ತಿಳಿಯದೆ ಅಡುಗೆ ಮನೆಗೆ ಸೀಮಿತವಾಗುತ್ತಾಳೆ.

"ಒಂದು ದಿನ ನನ್ನಪ್ಪ ವಿಜಾಪುರದಿಂದ ನಸುಕಿನಲ್ಲಿಯೇ ಬಂದವನೇ 'ಏ ಮಗ ನಮಗ ಸ್ವಾತಂತ್ರ್ಯ ಬಂತು ಹೋಳಿಗಿ ಮಾಡು ಹೋಳಿಗಿ ಮಾಡು' ಎಂದು ಅವ್ವಾಗೆ ಹೇಳಿ ಹೋಳಿಗಿ ಮಾಡಿಸಿದನಂತೆ. ಅಜ್ಜಿ 'ಅಷ್ಟ್ಯಾಕ ಹೋಳಿಗಿ ಮಾಡೋದು' ಎಂದು ಬೇಸೂರು ಎತ್ತಿದರೂ ಲೆಕ್ಕಿಸದೆ ಹೆಚ್ಚಿಗೇನೆ ಮಾಡಿಸಿ ಕೇರಿಯ ಮನೆಮನೆಗೆಲ್ಲ ಹೋಗಿ ಅವರ ಬಾಯಿಯಲ್ಲಿ ಹೋಳಿಗೆ ಇಟ್ಟು ಸಂಭ್ರಮವನ್ನು ಹಂಚಿಕೊಂಡಿದ್ದರು."

ಒಂದು ಸಾಮಾನ್ಯ ಹೆಣ್ಣಿನ ದೃಷ್ಟಿಯಲ್ಲಿ ಸ್ವಾತಂತ್ರ್ಯ ಎನ್ನುವುದು ಗಂಭೀರ ವಿಷಯವಾಗಿ ಅವಳಿಗೆ ಕಂಡಿದ್ದಿಲ್ಲ. ಕೇವಲ ದಲಿತ ಹೆಣ್ಣಿಗಷ್ಟೆ ಅಲ್ಲದೆ ಎಲ್ಲಾ ವರ್ಗದ ಸ್ತ್ರೀಯರಲ್ಲಿಯೂ ಇದೇ ರೀತಿಯ ಕಲ್ಪನೆಗಳಿದ್ದಿರಬಹುದು.

ಸಮಾಜದ ಪ್ರತಿಯೊಂದು ಸಮುದಾಯದಲ್ಲಿಯೂ ಅವರ ಸಾಮಾಜಿಕ ಮತ್ತು ಧಾರ್ಮಿಕ ಬದುಕುಗಳು ಅವರ ಆರ್ಥಿಕ ಸ್ಥಿತಿಗಳನ್ನ ತಿಳಿಸುತ್ತಿರುತ್ತವೆ. ಅದೇ ರೀತಿ ಒಂದು ಹೆಣ್ಣಿನ ಸಾಮಾಜಿಕ ಜೀವನ ಅಧ್ಯಯನ ಮಾಡುವಾಗ ದಲಿತ ಮಹಿಳೆಯ ರಾಜಕೀಯ ಬದುಕು ಕೂಡ ಪರೋಕ್ಷವಾಗಿ ತಿಳಿಯುತ್ತಿರುತ್ತವೆ.

ಈ ರೀತಿ ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಬದುಕು ಒಂದಕ್ಕೊಂದು ಪೂರಕವಾಗಿರುತ್ತವೆ.

## ಅಧ್ಯಾಯ ಮೂರು

# ಊರು ಕೇರಿಯಲ್ಲಿ ಹೆಣ್ಣು

ಇಪ್ಪತ್ತನೆಯ ಶತಮಾನದಲ್ಲಿ ಹುಟ್ಟಿಕೊಂಡ ಸಾಮಾಜಿಕ ಸಮಾನತೆಯ ಕೂಗು ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಗಟ್ಟಿಗೊಳ್ಳಲು ಸಿದ್ಧಲಿಂಗಯ್ಯನವರ ಸಾಧನೆ ಅನನ್ಯವಾದುದು. ಅವರ ಬರಹದ ವ್ಯಾಪ್ತಿ ತುಂಬಾ ವಿಸ್ತಾರವಾದುದು. ಅವರ ವೈಚಾರಿಕ ಚಿಂತನೆಗಳು ಕೇವಲ ಅಧ್ಯಯನದಿಂದ ಬಂದವುಗಳಲ್ಲ. ಅವುಗಳ ಹಿಂದೆ ಅನುಭವದ ಸತ್ಯಗಳಿವೆ. ಬಡತನ, ಶೋಷಣೆ ತನ್ನ ಸಮುದಾಯದ ನೋವನ್ನು ಸಮಗ್ರವಾಗಿ ಅಭಿವ್ಯಕ್ತಿಸುವ ಸೃಜನಶೀಲ ಶಕ್ತಿಯನ್ನು ಅವರ ಸಾಹಿತ್ಯದಲ್ಲಿ ಕಾಣಬಹುದು.

ತಮ್ಮ ಸಮಕಾಲೀನ ಸಾಹಿತ್ಯ ಪ್ರಸ್ತುತ ಸಮಾಜದ ಬಗ್ಗೆ ಯೋಚಿಸುವಂತಾಗಬೇಕು. ಆ ರೀತಿಯಲ್ಲಿ ಯೋಚಿಸುವ ಸಾಹಿತ್ಯ ಸರ್ವಕಾಲದಲ್ಲಿಯೂ ಮುಂಚುಣಿಯಲ್ಲೇ ಇರುತ್ತದೆ. (ಹತ್ತನೆ ಮತ್ತು ವಚನ ಸಾಹಿತ್ಯಗಳಂತೆ) ಹೊಸ ಹೊಸ ಚಿಂತನೆಗಳಿಗೆ ಮೂಲವಾಗುತ್ತಿರುತ್ತವೆ.

ಈ ರೀತಿಯ ಆಶಯಗಳ ನಡುವೆ ಹುಟ್ಟಿಕೊಂಡ ಸಿದ್ಧಲಿಂಗಯ್ಯನವರ ಸಾಹಿತ್ಯ ಪ್ರಶ್ನೆಯಾಗಿ, ಉತ್ತರವಾಗಿ, ಸಂಕಟ ಆನಂದಗಳ ಗಾನವಾಗುತ್ತ ವರ್ತಮಾನಕ್ಕೆ ಸ್ಪಂದಿಸುತ್ತಿವೆ.

ಒಟ್ಟಾರೆಯಾಗಿ ಹೇಳಬೇಕೆಂದರೆ ಸಿದ್ಧಲಿಂಗಯ್ಯನವರು ನೇರವಾದ, ನಯವನ್ನು ತಿರಸ್ಕರಿಸುವ, ರೋಷದ, ವ್ಯಂಗ್ಯದ ಓದುಗರನ್ನು ಬೆಚ್ಚಿ ಬೀಳಿಸುವ ಬರಹ ಇವರದು. ಸಾಹಿತ್ಯದ ಮುಖಾಂತರ ಇಡೀ ಸಮುದಾಯವೇ ಮಾತನಾಡಿದಂತೆ ಗೋಚರಿಸುತ್ತವೆ.

"ಬಾಲ್ಯದಿಂದ ಅವರು ವಿಶ್ವವಿದ್ಯಾನಿಲಯದಲ್ಲಿ ಸಂಶೋಧಕ ಸಹಾಯಕರಾಗಿ ಕೆಲಸಕ್ಕೆ ಸೇರುವವರೆಗಿನ ಜೀವನ ವೃತ್ತಾಂತ ಇಲ್ಲಿದೆ."[1]

---

1 ಬಡವರ ನಗುವಿನ ಶಕ್ತಿ ಪುಟ – ೫
(ನೂ) ದಂಡುಪ್ಪಿ

ಈ ಆತ್ಮಕಥೆ ಬಾಲ್ಯ ಮತ್ತು ಕಾಲೇಜು ದಿನಗಳಿಗಷ್ಟೆ ಕುರಿತಿರುವಂತಹುದು. (ಇತ್ತೀಚೆಗೆ ಸಿದ್ಧಲಿಂಗಯ್ಯನವರ ಆತ್ಮಕಥೆಯ ಭಾಗ-೨ ಪ್ರಕಟಗೊಂಡಿದೆ; ಆದರೆ ನನ್ನ ಪ್ರಬಂಧಕ್ಕೆ ೨ನೇ ಭಾಗ ತೆಗೆದುಕೊಂಡಿಲ್ಲ.)

ಡಿ. ಆರ್. ಹೇಳುವಂತೆ "ಬಾಲ್ಯ ಕಾಲ ಎನ್ನುವುದು ಬರೀ ವಯಸ್ಸಲ್ಲ ಅದೊಂದು ಸಮೃದ್ಧ ಸೃಜನಶೀಲ ಸ್ಥಿತಿ."[2]

ಸಮಾಜದಲ್ಲಿ ಅನೇಕ ಶತಮಾನಗಳಿಂದಲೂ ಹೆಣ್ಣು ಹಂತ ಹಂತವಾಗಿ ತುಳಿತಕ್ಕೆ ಸಿಕ್ಕಿ ನರಳುತ್ತಲೇ ಬದುಕಿರುವಳು. ಪುರುಷ ಪ್ರಧಾನ ಸಮಾಜದ ಎಲ್ಲಾ ತೆವಲುಗಳಿಗೆ ಮೂಕಿಯಾಗಿ ಹೆಗಲು ಕೊಟ್ಟಿರುವಳು.

ಆ ರೀತಿಯಲ್ಲಿ ಹೆಗಲು ಕೊಡುವಂತೆ ಶತಮಾನಗಳ ಕಾಲ ಅವಳನ್ನು ಪುರುಷ ಪ್ರಧಾನ ಸಮಾಜ ಪಳಗಿಸಿದೆ.

ಹೆಣ್ಣಾನೆ ತನ್ನ ಮರಿಯನ್ನು ತಾನೇ ಪಳಗಿಸುವಂತೆ ಹೆಣ್ಣು ಕೂಡ ತನ್ನ ಮಗಳನ್ನು ಪಳಗಿಸಲು ತರಬೇತುದಾರಳಾದಳು. ಅದರ ಫಲದಿಂದಾಗಿಯೇ ಇಂದಿಗೂ ಕೂಡ ಮಹಿಳೆ ದ್ವಿತೀಯ ವ್ಯಕ್ತಿಯಾಗಿಯೇ ಉಳಿಯಲು ಸಾಧ್ಯವಾಗಿದೆ. ಹೆಣ್ಣನ್ನು ಬಂಧಿಸುವ ಕಾರ್ಯದಲ್ಲಿ ನೇರವಾಗಿ ಹೆಣ್ಣು ಕಂಡರೆ ಪರೋಕ್ಷವಾಗಿ ಪುರುಷನ ಸಂಚು ಕಾಣುವುದು.

ಇಂದಿನ ಆಧುನಿಕತೆಯ ಸಂದರ್ಭದಲ್ಲಿ ಹೆಣ್ಣು ಕೂಡ ಆಧುನಿಕ ಸಮಸ್ಯೆಗಳಿಗೆ ಸಿಲುಕಿಕೊಳ್ಳುತ್ತಿದ್ದಾಳೆ. ಮಾರುಕಟ್ಟೆಯಲ್ಲಿ ಮಾರಾಟಕ್ಕಿಟ್ಟಿರುವ ವಸ್ತುಗಳೊಂದಿಗೆ ಮಾರಾಟಕ್ಕೆ ನಿಂತಿದ್ದಾಳೆ. ಮೊದಲು ನಾಲ್ಕು ಗೋಡೆಗಳ ನಡುವೆ ಇದ್ದಂತಹ ಸಮಸ್ಯೆಗಳು ಇಂದು ರಾಜ ಬೀದಿಗಳಲ್ಲಿ ಮೆರವಣಿಗೆ ಹೊರಟಿವೆ.

ಹೆಣ್ಣಿನ ಶೋಷಣೆ ಕೇವಲ ಕೆಲವೇ ಜನರಿಗೆ ಸೀಮಿತವಾಗಿರುವಂತಹುದಲ್ಲ. ಬದಲಿಗೆ ಎಲ್ಲಾ ವರ್ಗಗಳಲ್ಲಿಯೂ ಈ

---

[2] ಬಡವರ ನಗುವಿನ ಶಕ್ತಿ ಪುಟ - ೨೬೫
(ಸಂ) ದಂಡಪ್ಪ

ಪರಿಪಾಠವಿದೆ. ಆದರೆ ಶೋಷಣೆಯ ಮೊತ್ತದಲ್ಲಿ ವ್ಯತ್ಯಾಸಗಳನ್ನು ಗುರುತಿಸಬಹುದಷ್ಟೇ ತಳಸ್ಥರದಿಂದ ಮೇಲಕ್ಕೆ ಸಾಗಿದಂತೆಲ್ಲ ಶೋಷಣೆಯ ಪದರಗಳು ಹೆಚ್ಚುತ್ತಲೇ ಹೋಗುತ್ತವೆ.

ಸಮಾನತೆಯ ಕ್ಷೇತ್ರ ಕಿರಿದಾಗುತ್ತದೆ.




ಮೇಲಿನ ಚಿತ್ರವನ್ನು ನೋಡಿದರೆ ತಳ ಸಂಸ್ಕೃತಿಯಿಂದ ಮೇಲೆ ಏರಿದಷ್ಟು ಗಂಡು – ಹೆಣ್ಣಿನ ಸಮಾನತೆ ಕಡಿಮೆಯಾಗುತ್ತಿರುತ್ತದೆ. ಈ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಊರುಕೇರಿ ಆತ್ಮಕಥೆ ನೋಡಿದರೆ ಅಲ್ಲಿ ಮೂಡಿಬಂದಿರುವ ಹೆಣ್ಣುಗಳ ಬದುಕು ಸ್ಪಷ್ಟವಾಗುತ್ತದೆ. ಜೊತೆಗೆ ಆತ್ಮಕಥೆಗೆ ಹೇಗೆ ಪೂರಕವಾಗಿದೆ ಎಂದು ತಿಳಿಯುತ್ತದೆ.

## ಧಾರ್ಮಿಕವಾಗಿ ಹೆಣ್ಣು

ಮೂಲತಃ ಸಿದ್ಧಲಿಂಗಯ್ಯನವರಿಗೆ ದೇವರುಗಳ ಮೇಲೆ ನಂಬಿಕೆ ಇಲ್ಲವೆಂದು ಅವರ ಕೃತಿಗಳನ್ನು ಓದಿದರೆ ತಿಳಿಯುತ್ತದೆ. ಉದಾಹರಣೆಗೆ ಅವರ 'ಅವತಾರಗಳು' ಕೃತಿಯನ್ನೆ ನೋಡಬಹುದು. ಆದರೆ ಅವರಿದ್ದ ಸಮುದಾಯ ಧಾರ್ಮಿಕ ಕ್ಷೇತ್ರದಲ್ಲಿ ಯಾವ ರೀತಿಯಲ್ಲಿ ಸೇರ್ಪಡೆಯಾಗಿದೆ ಎನ್ನುವುದನ್ನ ನೋಡಿದರೆ ದೇವರುಗಳ ಆಚರಣೆಯಲ್ಲಿ ಎಲ್ಲರೂ ಕೂಡ ತಮ್ಮನ್ನು ತೊಡಗಿಸಿಕೊಂಡು ದೇವರುಗಳ ಬಯಕೆಗಳನ್ನು ತೀರಿಸುತ್ತಿದ್ದರು. ಅಂದರೆ ದೇವರ ಹೆಸರಿನಲ್ಲಿ ತಮ್ಮ ಅಗತ್ಯ ಆಸೆಗಳನ್ನ ಪೂರೈಸಿಕೊಳ್ಳುತ್ತಿದ್ದರು. ನೆಪಕ್ಕೆ ಮಾತ್ರ ದೇವರು ಇರುತ್ತದೆ. ಊರುಕೇರಿಯಲ್ಲಿ ಕಾಣಿಸಿಕೊಳ್ಳುವ ದೇವರುಗಳಲ್ಲಿ ಹೆಚ್ಚಾಗಿ ಹೆಣ್ಣು ದೇವರುಗಳೇ ಆಗಿರುತ್ತಿದ್ದವು. ಆ ದೇವರುಗಳನ್ನು ಪೂಜಿಸುವವರು ಕೂಡ ಅದೇ ಕೇರಿಯ ಜನರಾಗಿರುತ್ತಿದ್ದರು.

ನೂರನೊರ ಹಲ್ಲು ಕಡಿಯುವ ಜಲ್ದಗೆರೆ ಅಮ್ಮ ಎನ್ನುವ ಭಾಗದ ಮುಖಾಂತರ ಪ್ರಾರಂಭವಾಗುವ ಧಾರ್ಮಿಕ ಜೀವನ ವಿವಿಧ ದಿಕ್ಕುಗಳತ್ತ ಸಾಗುತ್ತದೆ.

ಲೇಖಕರ ಕೇರಿಯಲ್ಲಿ ಒಂದು ಮಾರಿಗುಡಿ ಇತ್ತು. ಆ ದೇವತೆಯ ಪೂಜಾರಿ ಒಬ್ಬ ಮುದುಕಿಯಾಗಿದ್ದಳು. ಈ ಮುದುಕಿ ಲೇಖಕರಿಗೆ ದೂರದಿಂದ ಅಜ್ಜಿಯಾಗಬೇಕಿತ್ತು. ಮಾರಿಯ ಹಬ್ಬವನ್ನು ಮಾಡುತ್ತಿದ್ದಾಗ ಮಾರಮ್ಮ ದೇವಿ ಈ ಅಜ್ಜಿಯ ಮೈದುಂಬಿ ಬರುತ್ತಿದ್ದಳು.

ಮೇಲುವರ್ಗಕ್ಕೆ ಭಿನ್ನವಾಗಿರುವ ವ್ಯವಸ್ಥೆಯನ್ನು ಇಲ್ಲಿ ಕಾಣಬಹುದು. ಮೇಲುವರ್ಗದ ದೇವತೆಗಳು ಹೆಚ್ಚಾಗಿ ಪುರುಷ ದೇವರಾಗಿರುತ್ತವೆ. ಜೊತೆಗೆ ಪೂಜಾರಿ ಕೂಡ ಪುರುಷನೇ ಆಗಿರುತ್ತಾನೆ. ಈ ವಿಷಯದಲ್ಲಿ ದಲಿತ ಮಹಿಳೆ ಉಳಿದ ಮಹಿಳೆಗಿಂತ ಉತ್ತಮವಾಗಿ ಕಾಣಿಸುತ್ತಾಳೆ.

ಲೇಖಕರ ಮೇಗಳ ಹಟ್ಟಿಯಲ್ಲಿ ಇನ್ನೊಂದು ದೇವತೆ ಮೈದುಂಬಿ ಬರುತ್ತಿತ್ತು. ಆ ದೇವತೆಯ ಹೆಸರು "ಜಲ್ದಗೆರೆ ಅಮ್ಮ" ವಾರಕ್ಕೊಮ್ಮೆ

ಮೈದುಂಬುವ ಆ ದೇವತೆಗೆ ಭಕ್ತರು ಬಹಳ, ಲೇಖಕರ ತಾಯಿಯೂ ದೇವತೆಯ ಭಕ್ತರಲ್ಲಿ ಒಬ್ಬಳು.

ಈ ಸಂದರ್ಭದಲ್ಲೇ ಊರಿನಲ್ಲಿ ಕೂಗು ಮಾರಿಯ ಗಲಾಟೆ ಶುರುವಾಯಿತು. ರಾತ್ರಿ ಹೊತ್ತು ಕೂಗು ಮಾರಿ ಮನೆಯ ಮುಂದೆ ನಿಂತು ಮನೆಯೊಳಗಿರುವ ಒಬ್ಬರ ಹೆಸರನ್ನು ಕೂಗುತ್ತಾಳೆ. ಅವರು ಮುಗ್ಧತೆಯಿಂದ 'ಓ' ಎಂದರೆ ಸ್ಥಳದಲ್ಲೇ ರಕ್ತಕಾರಿ ಸಾಯುತ್ತಾರೆ, ಎಂಬ ನಂಬಿಕೆಯನ್ನೂ ಸಹ ದೇವತೆಯ ಸುತ್ತಾ ಕಟ್ಟಿಕೊಂಡಿರುವುದನ್ನ ಗಮನಿಸಬಹುದು.

ಒಂದು ಹೆಣ್ಣಿನ ಜೀವನದಲ್ಲಿ ನಡೆದ ಸಾಂಸಾರಿಕ ತೊಂದರೆಗಳು, ಆರ್ಥಿಕ ತೊಂದರೆ, ದಾಂಪತ್ಯ ವಿರಹಗಳಿಂದ ನರಳುವ ಜನರು ಈ ರೀತಿಯ ಒಂದಲ್ಲಾ ಒಂದು ರೀತಿಯ ಪರ್ಯಾಯ ಮಾರ್ಗಗಳನ್ನು ಕಂಡುಕೊಳ್ಳುತ್ತಾರೆ. ತಾನು ಬದುಕಿದ್ದಾಗಲೆ ತನ್ನ ಗಂಡ ಬೇರೆಯ ಹೆಣ್ಣನ್ನ ಮದುವೆಯಾಗಿದ್ದರೆ ಅವನನ್ನು ಯಾವ ರೀತಿಯಲ್ಲಿಯೂ ಹೆದರಿಸಲಿಕ್ಕೆ ಸಾಧ್ಯವಾಗುವುದಿಲ್ಲ. ಆದುದರಿಂದ ಆ ಸಿಟ್ಟನ್ನು ಬೇರೆಯ ಕಡೆ ತಿರುಗಿಸಿ ಪ್ರತಿಭಟಿಸುವ ಕಾರ್ಯ ನಡೆಯುತ್ತದೆ. ಈ ರೀತಿಯ ಬದಲಾವಣೆಗೆ ಪುರುಷ ಪ್ರಧಾನ ವ್ಯವಸ್ಥೆಯನ್ನು ಪ್ರಶ್ನಿಸುವುದಕ್ಕೆ ಒಂದು ಅಸಹಾಯಕ ಹೆಣ್ಣು ಧಾರ್ಮಿಕ ಕ್ಷೇತ್ರಕ್ಕೆ ಪ್ರವೇಶಿಸುತ್ತಾಳೆ. ಕಾರಣ ಈ ದೇಶದಲ್ಲಿ ಧಾರ್ಮಿಕತೆಯನ್ನ ಮುಂದುವರೆಸಿಕೊಂಡು ಯಾವ ರೀತಿಯ ಕಾರ್ಯವಾದರೂ ಮಾಡಬಹುದು.

ಮಂಟೇ ಸ್ವಾಮಿಯ ಪರಂಪರೆ ಭಾಗದಲ್ಲಿ ನಾಯಕರ ಮನೆದೇವರ ಬಗ್ಗೆ ಹೇಳುತ್ತಾರೆ. ಒಂದು ದಿನ ಕೇರಿಯಿಂದ ಮೇಲಕ್ಕಿದ್ದ ಇಪ್ಪೆ ಮರದ ಕೆಳಗೆ ಗುರುಗಳು ಬಂದು ನಿಂತಿದ್ದಾರೆ ಎಂದು ಮನೆಯವರೆಲ್ಲ ಅವರಿಗೆ ನಮಸ್ಕರಿಸಿ ಕಾಣಿಕೆ ಅರ್ಪಿಸಿದರು. ಅವರು ಮಂಟೆ ಸ್ವಾಮಿಯ ಶಿಷ್ಯ ಪರಂಪರೆಯವರು ಮಂಟೆ ಸ್ವಾಮಿ ನಾಯಕರ ಮನೆದೇವರು ಸಿದ್ಧಲಿಂಗಯ್ಯನವರೇ ಹೇಳುವಂತೆ ನಮ್ಮ ದೇವರು ಹೊಲೆಯರವನೆಂದು ಹೇಳುತ್ತಾರೆ. ಆದರೆ ಈ ಗುರುಗಳು ಸವರ್ಣೀಯರು, ಆದ್ದರಿಂದಲೋ ಏನೋ ಹೊಲೆಯರ ಕೇರಿಗೆ ಹೆಜ್ಜೆ ಇಡಲಿಲ್ಲ. ಸದ್ಯ ಇಪ್ಪೆಮರದ ಕೆಳಕ್ಕಾದರೂ ಬಂದರಲ್ಲ ಎನ್ನುವ

ವ್ಯಂಗ್ಯವನ್ನು ಗುರುತಿಸಬಹುದು. "ಒಬ್ಬ ಸಾಂಸ್ಕೃತಿಕ ನಾಯಕನಾಗಿದ್ದ" ಮಂಟೆ ಸ್ವಾಮಿ ತಮ್ಮನ್ನು ತುಳಿತಕ್ಕೆ ಕಾರಣರಾಗಿದ್ದವರ ವಿರುದ್ಧ ಪ್ರತಿಭಟಿಸಿ ನಾಯಕನಾಗಿ ಮೆರೆದಾತವನು. ಶಿಷ್ಯರೆಂದು ಹೇಳಿಕೊಂಡು ಸವರ್ಣೀಯರು ಲಗ್ಗೆಯಿಟ್ಟು, ಮಂಟೇ ಸ್ವಾಮಿಯ ಪದ್ಧತಿಗಿಂತ ಬೇರೆಯದೇ ಪದ್ಧತಿ ಪ್ರಾರಂಭಿಸಿದ್ದನ್ನು ಗುರುತಿಸಬಹುದು.

ಈ ದೇಶದ ಹಣೆಯ ಬರಹವೇ ಈ ರೀತಿಯದು. ಬುದ್ಧ, ಮಹಾವೀರ, ಪೈಗಂಬರ್, ಬಸವಣ್ಣ ಆ ರೀತಿಯಾದವರು. ಎರಡು-ಮೂರು ಶತಮಾನ ಕಳೆದರೆ ಗಾಂಧಿ, ಅಂಬೇಡ್ಕರ್, ಕುವೆಂಪು ಇವರೂ ಕೂಡ ದೇವರಾಗುತ್ತಾರೆ. ಯಾವ ಪದ್ಧತಿಯನ್ನು ತಿರಸ್ಕರಿಸಿದ್ದರೋ ಅದೇ ಪದ್ಧತಿಯ ಒಳಗೆ ಶಿಲುಬೆಗೇರಿಸುತ್ತಾರೆ. ಇದನ್ನು ಮಂಟೇ ಸ್ವಾಮಿ ಪರಂಪರೆಯಲ್ಲಿ ನೋಡಬಹುದು.

ಕಿಲಾಡಿ ಮಾವ ಭಾಗದಲ್ಲಿ ಚಿತ್ರಿತವಾಗಿರುವಂತೆ ಲೇಖಕರ ಪಕ್ಕದ ಊರಿನಲ್ಲಿ ಒಬ್ಬ ವ್ಯಕ್ತಿಯ ಮೇಲೆ ಒಂದು ದೇವತೆ ಮೈದುಂಬುತ್ತಿತ್ತು. ಜನರು ಅದನ್ನು ಕುರಿದೇವರು ಎಂದು ಕರೆಯುತ್ತಿದ್ದರು. ಕಾರಣ ಆ ವ್ಯಕ್ತಿಯ ಮೇಲೆ ದೇವರು ಬಂದಾಗ ಕುರಿಯನ್ನು ಕೇಳುತ್ತಿದ್ದ. ತಕ್ಷಣ ಯಾರಾದರು ಭಕ್ತರು ಕುರಿಯನ್ನ ತಂದು ದೇವರು ಬಂದ ವ್ಯಕ್ತಿಯ ಮುಂದೆ ನಿಲ್ಲಿಸುತ್ತಿದ್ದರು. ದೇವತೆ ಮೈಯಿಳಿದ ನಂತರ ಪೂಜಾರಿ ಮತ್ತು ಭಕ್ತರು ಕುರಿ ಕೊಯ್ದು ಚೆನ್ನಾಗಿ ಊಟ ಮಾಡುತ್ತಿದ್ದರು. ಇದೇ ರೀತಿ ಒಮ್ಮೆ ದೇವತೆ ಮೈದುಂಬಿ ಕುರಿ ಎಂದಾಗ ಭಕ್ತರು ಯಥಾಪ್ರಕಾರ ಕುರಿಯನ್ನ ತಂದು ದೇವತೆ ಮುಂದೆ ನಿಲ್ಲಿಸಿದಾಗ ಆ ದೇವತೆ ಈ ಕುರಿ ಬೇಡ, ನನಗೆ ಮತ್ತೊಂದು ಕುರಿ ಬೇಕು ಎಂದು ಕೇಳಿತು. ಜನರು ಎಷ್ಟು ಬೇಡಿಕೊಂಡರೂ ಅವರ ಮಾತನ್ನ ಕೇಳುವ ಸ್ಥಿತಿಯಲ್ಲಿ ದೇವತೆ ಇರಲಿಲ್ಲ. ಆದರೆ ಕುರಿಯನ್ನು ನಿರಾಕರಿಸಲು ಕಾರಣ ಆ ಕುರಿ ದೇವತೆ ಬಂದಿದ್ದ ವ್ಯಕ್ತಿಯದೇ ಆಗಿತ್ತು. ಶೋಷಣೆ ಎನ್ನುವುದು ಕೇವಲ ಒಂದು ವರ್ಗಕ್ಕೆ ಮಾತ್ರ ಸೀಮಿತವಾಗರದೆ, ಒಂದು ಸಮುದಾಯದ ಜನರು ಅದೇ ಸಮುದಾಯದಲ್ಲಿ ಬದುಕುವ ಜನರನ್ನ ಶೋಷಿಸುವುದು ಕಾಣಬಹುದು.

ಈ ಕ್ರಿಯೆ ಬಾಹ್ಯ ಶೋಷಣೆಗಿಂತಲೂ ಆಂತರಿಕ ಶೋಷಣೆ ಹೆಚ್ಚು ಅಪಾಯಕಾರಿಯಾಗಿರುವಂತಹುದು.

ಕೆಳಮಟ್ಟದ ಸಮುದಾಯಗಳು ಸೃಷ್ಟಿಸಿಕೊಳ್ಳುವ ದೇವತೆ ಕೂಡ ಅಷ್ಟೇ ಮಟ್ಟದ್ದಾಗಿರುತ್ತದೆ. ಆದುದರಿಂದಲೇ ತಮ್ಮ ದಿನ ನಿತ್ಯದ ಬದುಕನ್ನ ಸಹಜವಾಗಿಯೇ ಆ ದೇವರ ಮೇಲು ಹೊರೆಸಿರುತ್ತಾರೆ. ತಮ್ಮ ಕೇರಿಗೆ ಕಾಲರಾ ಬಂದರೆ ಹಸು – ಕುರಿಗಳಿಗೆ ಯಾವುದಾದರು ರೋಗ ಬಂದರೆ ತಮ್ಮ ದೇವತೆಗೆ ಹಬ್ಬ ಮಾಡುತ್ತಾರೆ. ಅವರು ಮೊದಲು ಪೂಜಿಸುವುದೇ ಮಾರಮ್ಮಳನ್ನ.

ಒಂದು ಸಲ ಲೇಖಕರ ಕೇರಿಯಲ್ಲಿ ಕಾಲರಾ ಬರುತ್ತದೆ. ಆಗ ಮನೆ ಮನೆಗೂ ಚಂದಾ ಎತ್ತಿ ಹಬ್ಬ ಮಾಡುತ್ತಿದ್ದಾಗ ಒಬ್ಬನ ಮೇಲೆ ದೇವತೆ ಮೈದುಂಬುತ್ತದೆ. ಆಗ ಕೆಲವರು ಕೋಪದಿಂದ ದೇವತೆಯನ್ನು ನಮಗೆ ಕಾಲರಾ ಯಾಕೆ ತಂದಿರುವೆ ತಾಯಿ ? ಎಂದು ಕೇಳಿದಾಗ, ದೇವತೆ ಮಾತನಾಡದೆ ಒಂದೇ ಸಮನೆ ಅಳಲು ಪ್ರಾರಂಭಿಸುತ್ತದೆ. ಜನರು ಇದು ಕಲಿಗಾಲವೆಂದು ಸುಮ್ಮನಾಗುತ್ತಾರೆ.

ಇದೇ ರೀತಿ ದೆವ್ವಗಳು ಸಾಮಾನ್ಯವಾಗಿ ಹೆಂಗಸರ ಮೈದುಂಬುತ್ತಿರುತ್ತವೆ. ಒಬ್ಬ ವ್ಯಕ್ತಿಯ ಎರಡನೇ ಹೆಂಡತಿಗೆ ದೆವ್ವ ಬರುತ್ತಿತ್ತು. ಜನರು ಎಷ್ಟೇ ಪ್ರಯತ್ನ ಪಟ್ಟರೂ ಆಕೆಯನ್ನು ಹಿಡಿಯಲು ಆಗುತ್ತಿರಲಿಲ್ಲ. ದೆವ್ವ ಬಂದ ಕೂಡಲೆ ಆಕೆ ಮಾಡುತ್ತಿದ್ದ ಮೊದಲ ಕೆಲಸ ತನ್ನ ಗಂಡನ ಕುತ್ತಿಗೆ ಪಟ್ಟಿ ಹಿಡಿದು ಚೆನ್ನಾಗಿ ಹೊಡೆಯುವುದು. ದೆವ್ವ ಬಂದಿರುವ ಸಮಯವಾದ್ದರಿಂದ ಗಂಡ ಪ್ರತಿಯಾಗಿ ಕೈ ಮಾಡುತ್ತಿರಲಿಲ್ಲ.

ತನ್ನ ಗಂಡ ಎರಡನೇ ಮದುವೆಯಾಗಿ ಇವಳಿಗೆ ದೊರೆಯಬೇಕಿದ್ದ ದಾಂಪತ್ಯದ ಬದುಕು ತನ್ನ ಕಣ್ಣಿನ ಮುಂದೆಯೆ ಮತ್ತೊಂದು ಹೆಣ್ಣಿಗೆ ದೊರೆಯುತ್ತಿರುವುದನ್ನ ಕಂಡಂತ ಹೆಣ್ಣು ಸಹಿಸುವುದಿಲ್ಲ, ಪುರುಷ ಪ್ರಧಾನ ಸಮಾಜದಲ್ಲಿ ಅಸಹಾಯಕಳಾಗಿರುತ್ತಾಳೆ. ನೇರವಾಗಿ ಗಂಡನನ್ನು ವಿರೋಧಿಸಲು ಸಾಧ್ಯವಾಗುವುದಿಲ್ಲ. ಆದುದರಿಂದಲೇ ಈ ರೀತಿಯ ವರ್ತನೆಗೆ ತನ್ನ ಮನಸ್ಸು

ಸಿದ್ಧವಾಗುತ್ತದೆ. ಆ ಸಮಯವನ್ನು ಬಳಸಿಕೊಂಡವಳು ತನ್ನ ಮನಸ್ಸಿನಲ್ಲಿರುವ ರೋಷವನ್ನೆಲ್ಲ ಶಮನ ಮಾಡಿಕೊಂಡು ಮನಸ್ಸಿನ ತೂಕವನ್ನು ಕಡಿಮೆ ಮಾಡಿಕೊಳ್ಳುತ್ತಾಳೆ.

ಈ ರೀತಿಯ ಅಸಹಾಯಕ ಮನಸ್ಸು ದೇವರು, ದೆವ್ವಗಳಿಗೆ ಶರಣಾಗುತ್ತದೆ ಎನಿಸುತ್ತದೆ. ಮನುಷ್ಯ ಮತ್ತು ದೇವರು, ದೆವ್ವಗಳ ಸಂಬಂಧಗಳು ದಲಿತ ಸಮುದಾಯದಲ್ಲಿ ಸಹಜವಾಗಿ ದಿನನಿತ್ಯದ ಬದುಕಿಗೆ ಅಂಟಿಕೊಂಡಿರುತ್ತವೆ.

## ಸಾಮಾಜಿಕವಾಗಿ ಹೆಣ್ಣು

ಊರುಕೇರಿ ಆತ್ಮಕಥೆಯಲ್ಲಿ ಧಾರ್ಮಿಕ ಕ್ಷೇತ್ರದಲ್ಲಿ ಹೆಣ್ಣು ಹೇಗೆ ವಿಭಿನ್ನವಾಗಿ ನಿಲ್ಲುತ್ತಾಳೆ ಎನ್ನುವುದನ್ನ ಕಂಡ ನಂತರ ಸಾಮಾಜಿಕವಾಗಿ ಹೇಗೆ ಭಿನ್ನವಾಗಿರುತ್ತಾಳೆ ಎನ್ನುವುದನ್ನ ಈ ಭಾಗದಲ್ಲಿ ಕಾಣಬಹುದು. ಒಂದು ಹೆಣ್ಣಿನ ಬದುಕು ಕೇವಲ ಧಾರ್ಮಿಕ ಕ್ಷೇತ್ರಗಳಿಗೆ ಸೀಮಿತವಾಗಿರದೆ ಬೇರೆ ಬೇರೆ ಕ್ಷೇತ್ರಗಳಿಗೂ ಕೂಡ ತನ್ನ ಬದುಕು ಸುತ್ತಿಕೊಂಡಿರುವುದನ್ನ ಕಾಣಬಹುದಾಗಿದೆ.

ಸಾಮಾಜಿಕವಾಗಿ ದಲಿತ ಹೆಣ್ಣು ಬೇರೆ ಸಮುದಾಯಗಳಿಗಿಂತ ಇಲ್ಲಿ ಹೆಚ್ಚು ಶೋಷಣೆಯನ್ನ ಅನುಭವಿಸಿರುತ್ತಾಳೆ. ಕಾರಣ ಅವಳು ರಾಜಕೀಯವಾಗಿ, ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಮೇಲುವರ್ಗದವರ ಜೊತೆಗೆ ತಮ್ಮ ಸಮುದಾಯದ ಜನರಿಂದಲೂ ಕಷ್ಟಕ್ಕೆ ಸಿಲುಕಿಕೊಂಡಿರುತ್ತಾಳೆ.

ಮೇಲುವರ್ಗದ ಮನೆಗಳಲ್ಲಿ, ಜಮೀನುಗಳಲ್ಲಿ ದುಡಿದ ಹೆಣ್ಣು ಮನೆಗೆ ಬಂದರೂ ಅವಳ ಕೆಲಸ ನಿಲ್ಲುತ್ತಿರಲಿಲ್ಲ. ಶ್ರೀಮಂತರ ಗದ್ದೆಗಳಲ್ಲಿ ಎತ್ತಾಗಿ ದುಡಿದುಬಂದಂತಹ ಹೆಣ್ಣು ಗಂಡನ ಭುಜಕ್ಕೆ ಎಣ್ಣೆ ಹಚ್ಚುವುದು ಅವನ ಸೇವೆಯನ್ನು ಮಾಡುವುದು ಅವಳ ಕೆಲಸವಾಗಿರುತ್ತಿತ್ತು. ಮನೆಯ ಹೊರಗೆ ಮತ್ತು ಒಳಗೆ ದುಡಿಯುತ್ತಾ ತನ್ನ ಜೀವನವನ್ನು ಸವೆಸುತ್ತಿರುತ್ತಾಳೆ. ಮೇಲುವರ್ಗದ ಮನೆಗಳಿಗೆ ಹೋಗಿ ಅವರ ಮನೆಯಲ್ಲಿ ಮಾಡಿರುತ್ತಿದ್ದ ತಿಂಡಿಗಳನ್ನು ಪಡೆದುಕೊಂಡು, ಅವರ ಹಳೆಯ ಬಟ್ಟೆಗಳನ್ನೊ ಅಥವಾ ಸ್ವಲ್ಪ ಹರಿದು ಹೋದ ಬಟ್ಟೆಗಳನ್ನು ಪಡೆದುಕೊಂಡು ಅವುಗಳನ್ನ ಬಳಸುತ್ತಿದ್ದರು. ಹೀಗೆ ಪರರಿಗೆ ಬೇಡ ಎನಿಸಿದ್ದು ಕೊನೆಗೆ ಇವರ ಪಾಲಾಗುತ್ತಿತ್ತು.

'ಗಂಧರ್ವ ಲೋಕದ ಬಂಜಾರರು' ಭಾಗದಲ್ಲಿ ಬರುವ ಒಂದು ಪ್ರಸಂಗ ಲೇಖಕರ ಮನೆಯ ಎದುರಿಗಿದ್ದ ಸಂಸಾರ ಇವರಂತೆಯೆ ಬಡವರದು. ಗಂಡ ಕುಳ್ಳಗೆ ಸಣ್ಣಗಿದ್ದ. ಸದಾ ಬೀಡಿ ಸೇದುತ್ತಿದ್ದ. ಅವನ ಹೆಂಡತಿ ಭಾರಿ ಗಟ್ಟಿಮುಟ್ಟಾದ ಹೆಂಗಸು. ದಿನವೂ ಅವನನ್ನು ಹೊಡೆಯುತ್ತಿದ್ದಳು.

ಈ ಪ್ರಸಂಗವನ್ನು ನೋಡಿದರೆ ಪುರುಷ ಪ್ರಧಾನ ವ್ಯವಸ್ಥೆಯು ಗಾಳಿಯಲ್ಲಿ ತೂರಿಹೋಗಿತ್ತು. ತಪ್ಪು ಮಾಡಿದ ಗಂಡನನ್ನು ಯಾವ ಮುಲಾಜಿಲ್ಲದೆ ಹೊಡೆಯುತ್ತಿದ್ದಳು. ಈ ರೀತಿ ಗಂಡ ತಪ್ಪು ಮಾಡಿದಾಗ ಹೆಂಡತಿ ತಿರುಗಿ ಬೀಳುವುದನ್ನ ಮೇಲು ಜಾತಿಯಲ್ಲಿ ನೋಡಲು ಕಷ್ಟಸಾಧ್ಯ. ಅಲ್ಲಿ ಗಂಡ ಎಷ್ಟೇ ತಪ್ಪು ಮಾಡಿದರೂ ಅವನು ದೇವರಾಗಿಯೇ ಉಳಿಯುತ್ತಾನೆ. ಅವನ ಸೇವೆಯೇ ಹೆಣ್ಣಿನ ಬದುಕಾಗಿರುತ್ತದೆ. ಆದರೆ ಕೆಲವು ಕುಟುಂಬದಲ್ಲಿ ಪುರುಷನಿಗಿಂತ ಹೆಣ್ಣು ಪ್ರಬಲವಾಗಿರುತ್ತಾಳೆ.

ಮಹಾತ್ಮಾ ಗಾಂಧಿಯವರ ಮಾತು ಕೇಳಿದ್ದ ಮಂಚನ ಬೆಲೆಯ ತಾತ ಎನ್ನುವ ಭಾಗದಲ್ಲಿ ಲೇಖಕನ ಅಜ್ಜಿಯ ಬಗ್ಗೆ ಬರೆದಿದ್ದಾರೆ. ಅಜ್ಜಿ ಜಾನಪದ ಕಥೆಗಳ ಆಗರವಾಗಿದ್ದಳು. ಬೇರೆ ಊರಿನಲ್ಲಿ ನಡೆಯುವ ಹಬ್ಬ, ಮದುವೆಗಳಿಗೆ ಅಜ್ಜಿ ಲೇಖಕರನ್ನು ಕರೆದುಕೊಂಡು ಹೋಗುತ್ತಿದ್ದಳು. ಒಂದು ದಿನ ಬೀದಿಯಲ್ಲಿ ಲೇಖಕರು ಜೋರಾಗಿ ಓಡುತ್ತಿದ್ದರು. ಎದುರಿಗೆ ಬರುತ್ತಿದ್ದವರ ಬಟ್ಟೆಗೆ ಅವರ ಕೈ ಸೋರಿತು. ಆ ವ್ಯಕ್ತಿ ಕೋಪಗೊಂಡು ನಿಂತುಬಿಟ್ಟರು. ಗಾಬರಿಗೊಂಡು ಲೇಖಕರೂ ನಿಂತುಬಿಟ್ಟರು. ಅಜ್ಜಿ ಆ ವ್ಯಕ್ತಿಯನ್ನು ಪರಿಪರಿಯಾಗಿ ಕ್ಷಮೆ ಕೇಳಿದ ಮೇಲೆ ಆತ ಹೊರಟು ಹೋದ. ಆತ ಕೋಪಗೊಂಡದ್ದು ಸವರ್ಣೀಯನಾದ ಆತನನ್ನು ಒಬ್ಬ ದಲಿತ ಮುಟ್ಟಿದ ಎಂಬ ಕಾರಣಕ್ಕೆ. ಲೇಖಕರ ಅಚಾತುರ್ಯದಿಂದ ಮೇಲುಜಾತಿಯವರ ಕೋಪಕ್ಕೆ ತುತ್ತಾಗಬಹುದೆಂದು ಅಜ್ಜಿ ಹೆದರಿದಳು. ಅಂದಿನಿಂದ ಲೇಖಕರಿಗೆ ದಾರಿಯಲ್ಲಿ ಓಡಬಾರದೆಂದು ತಾಕೀತು ಮಾಡಿದಳು. ದೊಡ್ಡವರು ಯಾರೇ ಕಾಣಲಿ ಅವರಿಗೆ ಕೈ ಜೋಡಿಸಿ 'ನಮಸ್ಕಾರ ಸ್ವಾಮಿ' ಎಂದು ಹೇಳಬೇಕೆಂದು ಕಡ್ಡಾಯ ಮಾಡಿದಳು. "ಈ ಪದ್ಧತಿಯನ್ನು ಕಟ್ಟುನಿಟ್ಟಾಗಿ ಪಾಲಿಸಿ ಎಲ್ಲರ ಹೊಗಳಿಕೆಗೆ ಪಾತ್ರನಾದೆ" ಎನ್ನುತ್ತಾರೆ ಲೇಖಕರು.

ಈ ಪ್ರಸಂಗದಿಂದಲೇ ತಿಳಿಯುತ್ತದೆ ಶೋಷಣೆ ಯಾವ ರೀತಿಯಲ್ಲಿ ಸಾಗಿತ್ತು ಎನ್ನುವುದು. ಮೇಲು ಜಾತಿಯವರು ಓಡಾಡುತ್ತಿದ್ದಲ್ಲಿ ನಡೆದಾಡುವ ಹಕ್ಕು ಕೆಳಜಾತಿಯವರಿಗಿರಲಿಲ್ಲ. ಈ ರೀತಿಯ ಸಮಾಜದಲ್ಲಿ ಕಿರಿಯರನ್ನ ಹಿರಿಯರು ಯಾವ ರೀತಿಯಲ್ಲಿ ಪಳಗಿಸುತ್ತಿದ್ದರು ಎಂಬುದನ್ನು ತಿಳಿಯಬಹುದು.

ಸವರ್ಣಿಯರಿಗೆ ನಮಸ್ಕಾರ ಮಾಡುತ್ತಾ ತಲೆತಗ್ಗಿಸಿ ನಡೆದು ಅವರು ಮಾಡಿದ್ದೆ ಸರಿ ಎಂದು ಹೊಗಳಿದರೆ ಆ ದಲಿತ ವ್ಯಕ್ತಿ ಎಲ್ಲರಿಂದ ಹೊಗಳಿಸಿಕೊಳ್ಳುತ್ತಾನೆ. ಎಷ್ಟೆಷ್ಟು ಗುಲಾಮನಾಗುತ್ತಾನೊ ಅಷ್ಟಷ್ಟು ಹೊಗಳಿಕೆಗೆ ಪಾತ್ರನಾಗುತ್ತಾನೆ. ಆದುದರಿಂದಲೆ ದಲಿತ ವ್ಯಕ್ತಿಯ ಮನಸ್ಸಿನಲ್ಲಿ ದಾಸ್ಯದ ಗುಣಗಳು ಮಡುಗಟ್ಟಿನಿಂತಿರುತ್ತವೆ. ಈ ರೀತಿಯ ಪದ್ಧತಿಯನ್ನು ಕಲಿಸುವುದು ಕೂಡ ಅವರ ಸಮುದಾಯದ ಹಿರಿಯರೆ ಯಾವುದನ್ನು ಪ್ರಶ್ನಿಸದೆ ಆ ವ್ಯವಸ್ಥೆಯನ್ನು ತಮ್ಮ ಮುಂದಿನ ಪರಂಪರೆಗೆ ಸಾಗಿಸುತ್ತಿರುತ್ತಾರೆ.

ಶೋಷಣೆಗೆ ತಲೆಬಾಗಿ ನಿಲ್ಲುತ್ತಿದ್ದ ಹೆಣ್ಣುಗಳು ತಮ್ಮ ಕೇರಿಯಲ್ಲಿ ತಮ್ಮ ಮನೆಗಳಲ್ಲಿ ಗಂಡನನ್ನು ಮೀರಿಸುವ ಕೆಲಸಗಳಿಗೆ ಕೈ ಹಾಕುತ್ತಿದ್ದರು. ಉದಾಹರಣೆಗೆ ಈ ಭಾಗವನ್ನು ನೋಡಬಹುದು. ಇವರು ಮೀನು ಹಿಡಿಯುವುದರಲ್ಲಿ ನಿಷ್ಣಾತರು. ನದಿಯಲ್ಲಿ ಓಡುತ್ತಾ ಮೀನು, ಕೊರವ ಹಾವು ಮೀನುಗಳನ್ನ ಹಿಡಿಯುತ್ತಿದ್ದರು.

ಈ ರೀತಿಯ ಕಾರ್ಯಗಳು ಕೇವಲ ಪುರುಷರಿಗೆ ಮಾತ್ರ ಸೀಮಿತವಾಗಿರುವಂತಹವು. ಆದರೆ ತಳ ಸಮುದಾಯದಲ್ಲಿ ಗಂಡಿನ ಜೊತೆಯಲ್ಲಿ ಎಷ್ಟೋ ಸಲ ಬೇಟೆಯಾಡಿರುವ ಉದಾಹರಣೆಗಳು ಸಿಗುತ್ತವೆ. ಅನೇಕ ಸ್ತರಗಳಲ್ಲಿ ಗಂಡಿಗೆ ಸರಿಸಮಾನಳಾಗಿ ಕಾಣುತ್ತಾಳೆ. ಅದೇ ಹೆಣ್ಣು ಮೇಲುವರ್ಗದ ಮುಂದೆ ಕುಸಿದು ನೆಲಕಚ್ಚುತ್ತಾಳೆ. ಇಂದು ಕುಡಿತದ ಬಗ್ಗೆ ಅನೇಕ ಚರ್ಚೆಗಳು ನಡೆಯುತ್ತಿರುತ್ತವೆ. ಆರ್ಥಿಕ ದೃಷ್ಟಿಯಿಂದ ಕುಡಿತವನ್ನ ನೋಡುವವರು ಒಂದು ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ. ಸಾಮಾಜಿಕ ದೃಷ್ಟಿಯಿಂದ ಬೇರೆಯಾಗುತ್ತದೆ. ಮಕ್ಕಳು ಮತ್ತು ಮಹಿಳೆಯರ ಪಾಲಿಗೆ ಕುಡಿತ ನರಕವಾಗಿರುತ್ತದೆ. ಈ ಕುಡಿತ ಮತ್ತು ತಳ ಸಮುದಾಯಗಳ ನಡುವಿನ ಸಂಬಂಧವನ್ನು ಸರಳವಾಗಿ ವ್ಯಾಖ್ಯಾನಿಸಲಾರದು. ಗಾರೆ ಕೆಲಸ ಮಾಡುವವರು, ಮರ ಕುಯ್ಯುವವರು, ಬಂಡೆ ಸೀಳುವವರು, ಈ ರೀತಿಯ ಕೂಲಿ ಕೆಲಸ ಮಾಡುವವರು ಒಂದು ದಿನ ಕುಡಿಯದಿದ್ದರೆ ಮರುದಿನ ಅವರು ಕೆಲಸಕ್ಕೆ ಹೋಗದೆ ಮನೆಯಲ್ಲಿ ಇರಬೇಕಾಗುತ್ತದೆ. ಅವರ ಹೊಟ್ಟೆಗೆ ತಣ್ಣೀರೆ ಗಟ್ಟಿ ಆಗಬೇಕಾಗುತ್ತದೆ. ಬೆಳಿಗ್ಗೆಯಿಂದ ಸಂಜೆ ತನಕ ದುಡಿದ ದೇಹಕ್ಕೆ ವಿಶ್ರಾಂತಿ ಅಗತ್ಯವಾಗುತ್ತದೆ.

ಆದುದರಿಂದಲೆ ಕುಡಿದು ಮಲಗಿ, ಬೆಳಿಗ್ಗೆಯಾದ ಕೂಡಲೇ ಮತ್ತೆ ಕೆಲಸಕ್ಕೆ ಸಿದ್ಧರಾಗಬೇಕಾಗುತ್ತದೆ. ಈ ತಳ ಸಮುದಾಯಗಳು ಕುಡಿಯುತ್ತಾ ಬಂದಿರುವುದರಿಂದಲೇ ಈ ಭಾರತ ಇಷ್ಟು ದಿನಗಳು ಒಂದು ಮಟ್ಟದ ಶಾಂತಿಯಲ್ಲಿ ಬದುಕಿರುವುದು. ಇಲ್ಲವಾದರೆ ಭಾರತದ ಶ್ರೀಮಂತರ ಬದುಕು ಎಂದೋ ಛಿದ್ರವಾಗುತ್ತಿದ್ದವು.

ಈ ಕುಡಿತದ ವಿಷಯ ಬಂದಾಗ ದಲಿತ ಸಮುದಾಯದಲ್ಲಿ ಗಂಡು ಮತ್ತು ಹೆಣ್ಣು ಸಮಾನವಾಗಿ ಕಾಣಿಸುತ್ತಾರೆ. ಇಬ್ಬರೂ ಹಂಚಿಕೊಂಡು ಕುಡಿಯುವ ಸಂದರ್ಭಗಳು ಕಾಣಬಹುದು. ಅಥವಾ ಅವಳೇ ದುಡಿದು ಕುಡಿದು ತನ್ನ ಮೈ ಭಾರವನ್ನು ಶಮನಗೊಳಿಸಿಕೊಳ್ಳುತ್ತಾಳೆ. ಈ ರೀತಿಯ ಒಂದು ಪ್ರಸಂಗವನ್ನು ಇಲ್ಲಿ ನೋಡಬಹುದು.

ಎಚ್ಚರ ತಪ್ಪಿರುವಂತಹ ಒಂದು ಹೆಣ್ಣಿನ ಮುಂದೆ ಅದೇ ಸಮುದಾಯಕ್ಕೆ ಸೇರಿರುವಂತಹ ಪುರುಷರು ಅವಳ ದೇಹವನ್ನು ಭೋಗದ ವಸ್ತುವಂತೆ ಬಳಸಿಕೊಳ್ಳುವುದು ಪರೋಕ್ಷವಾಗಿ ಆ ಸಮುದಾಯದ ಬದುಕನ್ನ ತಿಳಿಸುತ್ತಿರುತ್ತದೆ. ಆ ಹೆಣ್ಣಿನ ಬದುಕು ಕೂಡ ಯಾವುದೇ ಎಚ್ಚರಿಕೆ ಇಲ್ಲದೆ ಪ್ರಾಣಿಗಳ ಬದುಕಿನಂತಿರುವುದು ಅವರ ಮೌಢ್ಯತೆಯ ಸಂಕೇತವಾಗಿದೆ. ಕುಡಿತದಿಂದ ಅವಳ ದೇಹಕ್ಕೆ ಸಿಕ್ಕ ನಿದ್ದೆ ದೇಹದ ಮೇಲಾಗುತ್ತಿರುವ ಆಕ್ರಮಣಗಳನ್ನು ಲೆಕ್ಕಿಸದೇ ಹೋಗಿದೆ. ಈ ಆಕ್ರಮಣಕ್ಕಿಂತ ಅವಳ ಕೂಲಿ ಕೆಲಸದಲ್ಲಿ ದುಡಿದ ದೇಹದ ಥಣಿವು ಹೆಚ್ಚಿರಬಹುದು ಅಥವಾ ಅವಳ ಮನಸ್ಸು ದೇಹದ ಹಂಗನ್ನೇ ಮೀರಿರಬಹುದು. ಒಂದು ನಿರ್ಧಾರಕ್ಕೆ ಬರುವುದು ಕಷ್ಟವಾಗುತ್ತದೆ. ಆದರೂ ದಲಿತ ಸಮುದಾಯದ ಈ ಹೆಣ್ಣು ಒಂದು ಮೌಢ್ಯದ ಸಂಕೇತದ ರೀತಿಯಲ್ಲಿ ಕಾಣುತ್ತಾಳೆ.

ಒಬ್ಬ ವ್ಯಕ್ತಿ ಹೆಂಡತಿಯ ಹೊಡೆತಕ್ಕೆ ತಾಳಲಾರದೆ ರಾತ್ರಿಯೆಲ್ಲ ಮನೆಯ ಮೇಲೆ ಕುಳಿತಿರುತ್ತಿದ್ದ ಸುತ್ತಮುತ್ತಲಿನ ಜನ ಅವನನ್ನು ನೋಡಿ ಕಳ್ಳನೆಂದೆ ತಿಳಿದಾಗ ಆ ಗುಂಪಿನಲ್ಲಿ ಇದ್ದ ಒಬ್ಬ ಆ ವ್ಯಕ್ತಿ ಕಳ್ಳನಲ್ಲ. ಆ ಮನೆಯವನೇ ಎಂದು ಹೇಳುತ್ತಾನೆ. ಆಗ ಅಲ್ಲಿದ್ದವರೆಲ್ಲ ಎಷ್ಟು ಹೇಳಿದರೂ

ಅವನು ಮನೆಯ ಮೇಲಿಂದ ಕೆಳಗೆ ಇಳಿಯುವುದಿಲ್ಲ. ಇಳಿದರೆ ನನ್ನ ಹೆಂಡತಿ ಹೊಡೆಯುತ್ತಾಳೆ. ಆದರೆ ಅವನ ಹೆಂಡತಿಗೆ ಬುದ್ಧಿ ಹೇಳುವ ಧೈರ್ಯ ಯಾರಿಗೂ ಇರಲಿಲ್ಲ.

ಇಲ್ಲಿ ಈ ಹೆಣ್ಣು ಯಾವ ಪುರುಷನಿಗೂ ಸೊಪ್ಪು ಹಾಕದೆ ತನ್ನ ಗಂಡನನ್ನೆ ಹೊಡೆದು ಭಯಪಡಿಸುವಷ್ಟು ಗಟ್ಟಿಗಿತ್ತಿಯಾಗಿದ್ದಳು. ಇವಳ ಮುಂದೆ ಪುರುಷನ ಪೌರುಷ ಮೂಲೆ ಸೇರಿತ್ತು. ಈ ರೀತಿಯ ಬೆಳವಣಿಗೆ ಕೂಡ ಸಮಾಜದ ಪ್ರಗತಿಗೆ ಮಾರಕವಾಗಿರುತ್ತದೆ.

ಊರು ಕೇರಿಯಲ್ಲಿ ದಲಿತ ಹೆಣ್ಣುಗಳ ಬದುಕು ಒಮ್ಮೆ ಪುರುಷ ಸಮಾಜಕ್ಕೆ ಸವಾಲಿನಂತೆ ಕಾಣುತ್ತವೆ.

ಮತ್ತೊಮ್ಮೆ ಮಹಿಳಾ ಪ್ರಧಾನತೆಯ ಅಂಶಗಳು ರಾರಾಜಿಸುತ್ತವೆ. ಈ ರೀತಿಯಲ್ಲಿ ಅನೇಕ ನೋವು ನಲಿವುಗಳ ನಡುವೆ ಈ ಹೆಣ್ಣುಗಳ ಬದುಕುಗಳು ನಿರಂತರವಾಗಿ ಸಾಗುತ್ತಿರುತ್ತವೆ.

### ಆರ್ಥಿಕವಾಗಿ ಹೆಣ್ಣು

ಈ ದೇಶದ ಬಹುಸಂಖ್ಯಾತ ದಲಿತ ಸಮುದಾಯದ ಕುಟುಂಬಗಳು ಆರ್ಥಿಕವಾಗಿ ನೆಲಕಚ್ಚಿರುತ್ತವೆ. ಒಂದು ಕುಟುಂಬದ ಎಲ್ಲಾ ಸದಸ್ಯರೂ ದುಡಿದರೂ ಒಂದು ಹೊತ್ತಿಗೂ ಸರಿಯಾಗಿ ಹೊಟ್ಟೆ ತುಂಬ ಊಟ ಮಾಡಲು ಸಾಧ್ಯವಾಗುವುದಿಲ್ಲ. ಅವರ ಬದುಕು ಅರೆ ಹೊಟ್ಟೆ ಬದುಕಾಗಿಯೆ ಮುಗಿಯುತ್ತದೆ. ಬಹುಶಃ ಈ ರೀತಿಯ ಸಮಸ್ಯೆಗಳಿಂದಾಗಿಯೆ ಈ ಸಮುದಾಯದಲ್ಲಿ ಆರ್ಥಿಕ ಕ್ಷೇತ್ರದಲ್ಲಿ ಗಂಡು ಮತ್ತು ಹೆಣ್ಣು ಸಮಾನವಾಗಿ ಕಾಣಿಸಿಕೊಳ್ಳುತ್ತಾರೆ. ಗಂಡು ದುಡಿಯುವ ಎಲ್ಲಾ ಕ್ಷೇತ್ರಗಳಿಗೆ ಹೆಣ್ಣು ಕೂಡ ಪ್ರವೇಶಿಸುತ್ತಾಳೆ. ಇವಳೂ ಕೂಡ ಆರ್ಥಿಕ ಭಾರವನ್ನು ಹೊರುತ್ತಾಳೆ. ಸಮಾಜದ ಸಂಪನ್ಮೂಲಗಳ ಅಸಮಾನತೆಯ ಹಂಚಿಕೆಯಿಂದಾಗಿ ಹಣವಿಲ್ಲದೆ ಹೊಟ್ಟೆ ತುಂಬಿಸಿಕೊಳ್ಳಲು ಗೆಣಸು, ಕಡಲೇಪುರಿ ತಿನ್ನಬೇಕಾಗಿರುತ್ತದೆ. ಊರು ಕೇರಿಯಲ್ಲಿ ಈ ಆರ್ಥಿಕತೆ ಸುಧಾರಣೆಗಾಗಿ ಲೇಖಕರ ತಾಯಿ ಸಾವನದುರ್ಗ ಕಾಡಿಗೆ ಹೋಗಿ ಸೌದೆ ತಂದು ಸಂತೆಯಲ್ಲಿ ಮಾರಿ ಸಂಸಾರ ಸಾಗಿಸಲು ನೆರವಾಗುತ್ತಿದ್ದಳು. ಅವರ ತಂದೆ ತರುತ್ತಿದ್ದ ಹಣ ಅವರ ಸಾಲದ ಬಡ್ಡಿ ಹಣ ತೀರಿಸಲು ಸಾಧ್ಯವಾಗದೆ ಹೋಗುತ್ತಿತ್ತು. ಆದುದರಿಂದ ಹೆಣ್ಣೇ ದುಡಿಮೆಗೆ ಕೈ ಹಾಕುತ್ತಿದ್ದಳು. ಕೃತಿಯಲ್ಲಿ ಬರುವ 'ಬಂಜಾರ' ಜಾತಿಯ ಮಹಿಳೆಯರದು ಕೂಡ ಇದೇ ಕೆಲಸವಾಗಿರುತ್ತಿತ್ತು. ದಲಿತ ಸಮುದಾಯ ಆರ್ಥಿಕ ಸ್ಥಿತಿ ಯಾವ ಮಟ್ಟಕ್ಕೆ ಇರುತ್ತದೆ ಎನ್ನುವುದನ್ನ ಈ ಪ್ರಸಂಗದಿಂದ ತಿಳಿಯಬಹುದಾಗಿದೆ.

ಅನೇಕ ಸಮುದಾಯಗಳಲ್ಲಿ ಹಣದಿಂದಾಗಿ ಸಂಬಂಧಗಳೇ ನಾಶವಾಗುತ್ತವೆ. ಯುವ ಜನರು, ಕಳ್ಳರಾಗುವುದು, ರೌಡಿಗಳಾಗುವುದು, ಸುಳ್ಳು ಹೇಳುವುದು, ಮೋಸ ಮಾಡುವುದು ಕಲಿಯುತ್ತಾರೆ. ಬುದ್ಧಿ ಬಲಿತಿರುವ ಮಕ್ಕಳ ಮೂಲ ಅಗತ್ಯಗಳನ್ನು ತಂದೆ ತಾಯಿಗಳು ಪೂರೈಸದಿದ್ದಾಗ, ಮಕ್ಕಳು ತಂದೆ ತಾಯಿಯರನ್ನ ನಿರಾಕರಿಸಿ ಬಿಡುತ್ತಾರೆ. ಹಣವಿಲ್ಲದಿದ್ದಾಗ ಮನೆ ಸದಾ ಕಾಲ ರಣರಂಗದಂತೆ ಕೂಗಾಟ, ಕಿರುಚಾಟಗಳು ದಿನನಿತ್ಯ ನಡೆಯುತ್ತಿರುತ್ತವೆ. ಈ ಎಲ್ಲದರ ನಡುವೆ ಹೆಣ್ಣಾದವಳು ಮಕ್ಕಳ ಹೊಟ್ಟೆ ತುಂಬಿಸಲು ಗೋಟಿ ಗಡ್ಡೆಗಳನ್ನು ತಿಂದು ಬದುಕು ಸಾಗಿಸುತ್ತಿದ್ದಳು.

ಹಸಿವಾದಾಗ ಎಷ್ಟೋ ಮಕ್ಕಳು ತಂದೆ-ತಾಯಿಯನ್ನ ಹೊಡೆಯಲು ಹೋಗುತ್ತಿರುತ್ತಾರೆ. ಲೇಖಕರ ತಾಯಿ ತನ್ನ ಬಡತನದ ಸಲುವಾಗಿ ಅನೇಕ ಕಷ್ಟಪಡುತ್ತಿದ್ದಳು. ಆ ಬಡತನವನ್ನು ನೀಗಿಸಿಕೊಳ್ಳಲು ಶ್ರೀರಾಮಪುರದ ದಲಿತ ವಿದ್ಯಾರ್ಥಿನಿಲಯದಲ್ಲಿ ಕಸಗುಡಿಸುವ ಕೆಲಸಕ್ಕೆ ಸೇರಿಕೊಂಡಳು.

ವಿದ್ಯಾರ್ಥಿಗಳಿಗೆ ಊಟ ಬಡಿಸಿ ಆದ ಮೇಲೆ ಅಲ್ಲಿಯ ಕೆಲಸಗಾರರಿಗೂ ಊಟ ಕೊಡುತ್ತಿದ್ದರು. ಅವರು ಕೊಡುತ್ತಿದ್ದ ಮುದ್ದೆ ಸಾರನ್ನು ಸಿದ್ಧಲಿಂಗಯ್ಯನವರ ತಾಯಿ ಮಧ್ಯಾಹ್ನ, ರಾತ್ರಿ ಮನೆಗೆ ತರುತ್ತಿದ್ದಳು. ಇದರಿಂದಾಗಿ ಅವರ ಹೊಟ್ಟೆಯ ಸಮಸ್ಯೆ ಬಗೆಹರಿಯುತ್ತಿತ್ತು.

ಸಿದ್ಧಲಿಂಗಯ್ಯನವರು ಶಿಕ್ಷಣ ಪಡೆದು ಒಬ್ಬ ಕವಿಯಾಗಿ ಅನೇಕ ವಿಭಾಗಗಳಲ್ಲಿ ಅಧಿಕಾರಿಯಾಗಿ ಕೆಲಸ ಮಾಡಲು ಅವರ ತಾಯಿಯ ಪಾತ್ರ ಬಹಳವಾಗಿ ನಿಲ್ಲುತ್ತದೆ. ಅವರ ತಂದೆ ಬಡತನವನ್ನು ತಾಳಲಾರದೆ ಅನೇಕ ವೇಳೆ ಊರು ಬಿಟ್ಟುಹೋಗುತ್ತಿದ್ದರು. ಆದುದರಿಂದ ಸಿದ್ಧಲಿಂಗಯ್ಯನವರ ಬದುಕಿನಲ್ಲಿ ತಂದೆಗಿಂತ ತಾಯಿಯೆ ಬಹಳ ಮುಖ್ಯವಾಗಿ ನಿಲ್ಲುತ್ತಾಳೆ.

## ರಾಜಕೀಯವಾಗಿ ಹೆಣ್ಣು

ಭಾರತೀಯ ಇತಿಹಾಸವನ್ನು ನೋಡಿದರೆ ಶೋಷಣೆಗೆ ಒಳಗಾದ ದಲಿತ ಸಮುದಾಯವು ಅಧಿಕಾರದ ಚುಕ್ಕಣಿಯನ್ನು ಹಿಡಿದ ಉದಾಹರಣೆಗಳು ಹೆಚ್ಚಾಗಿ ಲಭಿಸುವುದಿಲ್ಲ. ಆದರೆ ಭಾರತಕ್ಕೆ ಸ್ವಾತಂತ್ರ್ಯದ ಹೋರಾಟದಲ್ಲಿ ಈ ಸಮುದಾಯದ ಪಾತ್ರ ಬಹಳ ಮುಖ್ಯವಾಗಿ ಕಾಣಿಸುತ್ತದೆ. ತದನಂತರವೆ ಕೆಲವೊಂದು ಕಡೆ ದಲಿತರು ರಾಜಕೀಯ ಕ್ಷೇತ್ರದಲ್ಲಿ ಮಿಂಚಿರುವುದು ಕಂಡುಬರುತ್ತದೆ. ಆದರೆ ಮಹಿಳೆಯರ ದೃಷ್ಟಿಯಿಂದ ನೋಡಿದರೆ ಇದರ ಪ್ರಮಾಣ ಸೊನ್ನೆಯಂತೆ ಕಾಣುತ್ತದೆ. ಎಲ್ಲೋ ಮಾಯಾವತಿಯಂಥವರು ಬೆರಳೆಣಿಕೆಯಲ್ಲಿ ಕಂಡು ಬರುತ್ತಾರೆ.

ಈ ದೃಷ್ಟಿಯಿಂದಲೆ ಸರ್ಕಾರ ಮೀಸಲಾತಿಯಡಿಯಲ್ಲಿ ಚುನಾವಣಾ ಕ್ಷೇತ್ರ ಜಾರಿಗೆ ತಂದರು. ಹೆಸರಿಗೆ ಮಾತ್ರ ಒಂದು ದಲಿತ ಹೆಣ್ಣನ್ನು ಚುನಾವಣೆಗೆ ನಿಲ್ಲಿಸಿ ಅಧಿಕಾರವನ್ನು ಪುರುಷನೇ ನಡೆಸಿಕೊಂಡು ಹೋಗುತ್ತಿರುತ್ತಾನೆ. ಜಯಗಳಿಸಿದ ದಲಿತ ಹೆಣ್ಣು ಸದಾ ಕಾಲ ಮೇಲುವರ್ಗದ ಹಿಡಿತದಲ್ಲೆ ಇರಬೇಕಾಗಿರುತ್ತದೆ. ಅವರ ಮಾತುಗಳನ್ನ ವೇದ ವಾಕ್ಯಗಳೆಂದು ತಿಳಿಯಬೇಕಾಗಿರುತ್ತದೆ.

ದಲಿತ ಸಮುದಾಯ ಅಧಿಕಾರಕ್ಕೆ ಬರಬೇಕಾದರೆ ಅನೇಕ ರೀತಿಯ ಸಮಸ್ಯೆಗಳನ್ನ ಸಹಿಸಿಕೊಳ್ಳಬೇಕಾಗುತ್ತದೆ. ಈ ರೀತಿಯ ಸಮಸ್ಯೆಗಳನ್ನು ಮೆಟ್ಟಿನಿಂತು ಅಧಿಕಾರ ಪಡೆದರೂ ಅದನ್ನ ಉಳಿಸಿಕೊಳ್ಳಲು ಕಷ್ಟವಾಗುತ್ತದೆ. ಉದಾಹರಣೆಗೆ ಬಿ. ಬಸವಲಿಂಗಪ್ಪನವರನ್ನ ನೋಡಿದರೆ ತಿಳಿಯುತ್ತದೆ. ಬೂಸಾ ಚಳವಳಿಯ ನೆಪದಡಿಯಲ್ಲಿ ಅವರನ್ನು ಯಾವ ರೀತಿಯಲ್ಲಿ ತೆರೆಯ ಹಿಂದಕ್ಕೆ ಹೋಗುವಂತೆ ಮಾಡಿದರು. ಮೇಲುವರ್ಗದವರ ಹುನ್ನಾರಕ್ಕೆ ಎಷ್ಟೋ ಜನ ಮಹಿಳೆಯರು ಅತ್ಯಾಚಾರಕ್ಕೆ ತುತ್ತಾಗಿದ್ದಾರೆ.

ಊರುಕೇರಿಯಲ್ಲಿ ರಾಜಕೀಯ ಪ್ರಸಂಗಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಕೇವಲ ಎರಡು – ಮೂರು ಪ್ರಸಂಗಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತವೆ. ಆದರೆ ಅಲ್ಲಿ ಮಹಿಳೆಯರ ಪಾತ್ರವಂತು ತೆರೆಯ ಹಿಂದಯೆ ಇರು ತ್ತದೆ.

ಒಬ್ಬ ರಾಜಕಾರಣಿ ತಮ್ಮ ಕೇರಿಗೆ ಬರುವನೆಂದು ತಿಳಿದು ಅಲ್ಲಿನ ಪುರುಷರು ಸಕಲ ಸಿದ್ಧತೆಗಳನ್ನು ಮಾಡಿಕೊಂಡರೆ ಹೆಂಗಸರು ಆ ಎಲ್ಲಾ ಸಿದ್ಧತೆಗಳನ್ನ ಕುತೂಹಲದಿಂದ ನೋಡುವುದೆ ಆಗಿರುತ್ತದೆ. ಆದರೆ ಆ ರಾಜಕಾರಣಿ ಬರದೆ ಹೋದಾಗ ನಿಟ್ಟುಸಿರು ಬಿಟ್ಟು ಮನೆಗೆ ಹೋಗಿ ತಮ್ಮ ದಿನನಿತ್ಯದ ಬದುಕಿಗೆ ಕೈ ಹಾಕುತ್ತಾರೆ. ಮತ್ತೊಂದು ಪ್ರಸಂಗ ಲೇಖಕರ ದೊಡ್ಡಪ್ಪನಾದ ಆಲಯ್ಯ ಮಾಗಡಿ ಪುರಸಭೆ ಚುನಾವಣೆಯಲ್ಲಿ ಗೆದ್ದುದರಿಂದ ಆ ವಿಜಯೋತ್ಸವವನ್ನು ಕುದುರೆ ಮೇಲೆ ಕುಳ್ಳಿರಿಸಿಕೊಂಡು ಮೆರವಣಿಗೆ ನಡೆಸುತ್ತ ತಮ್ಮ ಕೇರಿಗೆ ಬಂದಾಗ ಚುನಾವಣೆಯಲ್ಲಿ ಗೆದ್ದ ವ್ಯಕ್ತಿ ಕುದುರೆಯಿಂದ ಕೆಳಗಿಳಿದು ತನ್ನ ತಾಯಿಯ ಕಾಲಿಗೆ ನಮಸ್ಕಾರ ಮಾಡಿ ಮುಂದೆ ಸಾಗುತ್ತಾನೆ.



ಈ ರೀತಿ ಪುರುಷನ ಯಶಸ್ವಿಯನ್ನು ಬೆಂಬಲಿಸುವುದೊ ಅಥವಾ ಅದನ್ನೆ ನೋಡಿ ಸೋಜಿಗ ಪಡುವುದೊ ಒಟ್ಟಾರೆಯಾಗಿ ಎರಡನೇ ಹಂತದಲ್ಲಿಯೇ ನಿಲ್ಲಬೇಕಾಗಿರುತ್ತದೆ. ಸಿದ್ಧಲಿಂಗಯ್ಯನವರ ತಂದೆ ಮನೆಗೆ ಸರಿಯಾಗಿ ಬರುತ್ತಿರಲಿಲ್ಲ. ಅವರ ತಾಯಿಯೆ ಎಲ್ಲಾ ರೀತಿಯ ಜವಾಬ್ದಾರಿಗಳನ್ನು ಹೊತ್ತು ಮಕ್ಕಳನ್ನು ಸಾಕುತ್ತಿದ್ದಳು. ಆದುದರಿಂದಲೇ ವಿದ್ಯಾರ್ಥಿನಿಲಯದಲ್ಲಿ ಕಸ ಗುಡಿಸಲು ಸೇರಿಕೊಂಡು ಅದೇ ವಿದ್ಯಾರ್ಥಿ ನಿಲಯಕ್ಕೆ ತನ್ನ ಮಗನಾದ ಸಿದ್ಧಲಿಂಗಯ್ಯನವರನ್ನು ಸೇರಿಸಿ ಮಗನ ಶಿಕ್ಷಣ ಮುಂದುವರಿಯಲು ಕಾರಣಳಾಗಿದ್ದಾಳೆ. ವಿದ್ಯಾರ್ಥಿನಿಲಯದಲ್ಲಿ ಕೆಲಸ ಮಾಡುತ್ತಿದ್ದಾಗ ವಿದ್ಯಾರ್ಥಿಗಳು ಸಿದ್ಧಲಿಂಗಯ್ಯನವರ ತಾಯಿಯನ್ನು ಬೈಯುತ್ತಿದ್ದರೂ ಆಕೆ ಯಾವುದೇ ರೀತಿಯ ಮಾತನಾಡದೆ ಕೆಲಸ ಮಾಡುತ್ತಿದ್ದಳು. ಸಿದ್ಧಲಿಂಗಯ್ಯನವರ ಊರುಕೇರಿಯಲ್ಲಿ ಬರುವ ಎಲ್ಲಾ ದಲಿತ ಹೆಣ್ಣುಗಳು ಕೂಡ ಆರ್ಥಿಕವಾಗಿ ಸೋತಿದ್ದವರೆ. ಆದರೆ ಆ ಸಮಸ್ಯೆಗಳನ್ನು ತುಂಬಲು, ಮಕ್ಕಳನ್ನು ಸಾಕಲು ಪಡಬಾರದ ಕಷ್ಟಗಳನ್ನು ಪಟ್ಟು ತಮ್ಮ ಬದುಕನ್ನು ನೀಗಿಸುತ್ತಿದ್ದರು.

ಊರುಕೇರಿಯಲ್ಲಿ ಬರುವ ಮಹಿಳೆಯರು ಎರಡು ರೀತಿಯ ಶೋಷಣೆಗೆ ತುತ್ತಾಗಿದ್ದರು, ಯಾವ ರೀತಿಯೆಂದರೆ ತಮ್ಮನ್ನು ಆಳುಗಳ ರೀತಿಯಲ್ಲಿ ನೋಡುತ್ತಿದ್ದ ಶ್ರೀಮಂತ ವರ್ಗದವರಿಂದ ಶೋಷಣೆಗೆ ಒಳಗಾಗಿದ್ದರು ಮತ್ತೊಂದು

ಎಂದರೆ ತಮ್ಮದೇ ಆದಂತಹ ಕೇರಿಯಲ್ಲಿ ಪುರುಷ ಸಮಾಜಕ್ಕೆ ಸಿಕ್ಕಿಕೊಂಡು ನಲುಗುತ್ತಿದ್ದುದು.

ಈ ರೀತಿಯಲ್ಲಿ ಏಕ ಕಾಲದಲ್ಲಿ ಬಾಹ್ಯ ಮತ್ತು ಆಂತರಿಕ ಸಮಾಜಗಳು ಮಾಡುತ್ತಿದ್ದ ದೌರ್ಜನ್ಯಗಳನ್ನು ಒಟ್ಟಿಗೆ ಸಹಿಸಿಕೊಳ್ಳಬೇಕಾಗಿತ್ತು.

ಸಮಾಜದ ಬದುಕುಗಳು ಸಮಗ್ರತೆಗೆ ತೆರೆದುಕೊಳ್ಳುವ ಮುಂಚೆ ಸ್ತ್ರೀ ಮತ್ತು ಪುರುಷರ ನಡುವೆ ಹೆಚ್ಚಿನ ತಾರತಮ್ಯಗಳು ಇರಲಿಲ್ಲ. ಆಗ ಬಹುಮಟ್ಟಿಗೆ ಬದುಕು ನೆಮ್ಮದಿಯಿಂದ ಇರಲಿಕ್ಕೆ ಸಾಧ್ಯವಿದೆ, ಕಾರಣ ಸಮಸ್ಯೆಗಳು ಕಡಿಮೆ ಇದ್ದುದು. ಮನುಷ್ಯ ಆಧುನಿಕನಾದಂತೆಲ್ಲ ದೈಹಿಕ ಕೆಲಸಗಳನ್ನು ಕಡಿಮೆ ಮಾಡಿಕೊಳ್ಳುತ್ತಿರುತ್ತಾನೆ. ಜೊತೆ ಜೊತೆಗೆ ಮೋಜಿನ ಬದುಕನ್ನು ಬಯಸಲು ಪ್ರಾರಂಭಿಸುತ್ತಾನೆ. ಆಗ ಹೆಣ್ಣನ್ನ ಮೋಜಿನ ಸಂಪತ್ತು ಎನ್ನುವ ತೀರ್ಮಾನಕ್ಕೆ ಬಂದು ಅವಳನ್ನ ಲೈಂಗಿಕತೆಯ ಕೇಂದ್ರವಾಗಿ ನೋಡಲು ಬಯಸುತ್ತಾನೆ. ಈ ಕಾರಣದಿಂದಲೇ ಹೆಣ್ಣನ್ನು ಮಣ್ಣು ಮತ್ತು ಹೊನ್ನುಗಳೊಂದಿಗೆ ಸೇರಿಸಿ ಅವಳೂ ಕೂಡ ಒಂದು ವಸ್ತು ಎಂದು ತಿಳಿದಿದ್ದಾನೆ.

ಈ ಮೇಲಿನ ಕಾರಣಗಳ ಜೊತೆಯಲ್ಲೆ ಎಂ. ಎನ್. ಶ್ರೀನಿವಾಸ್‌ರವರು ಹೇಳಿದ ರೀತಿಯಲ್ಲಿ "ಸಮಾಜವು ಸದಾ ಕಾಲದಲ್ಲಿಯೂ ಸಾಂಸ್ಕೃತೀಕರಣ ಮತ್ತು ಪಾಶ್ಚಾತೀಕರಣದ ಕ್ರಿಯೆಗಳಿಗೆ ಒಳಗಾಗಿರುತ್ತದೆ."*

ಇದರ ಫಲದಿಂದಲೇ ದಲಿತ ಸಮುದಾಯವು ಸಹ 'ಸಾಂಸ್ಕೃತೀಕರಣ'ಕ್ಕೊಳಗಾಗಿ ಹೆಣ್ಣಿನ ಸ್ಥಾನಮಾನಗಳು ಭಿನ್ನವಾಗತೊಡಗಿದವು. ಆದುದರಿಂದಲೇ ದಲಿತ ಸಮುದಾಯದ ಹೆಣ್ಣು ಏಕ ಕಾಲದಲ್ಲಿ ಬಾಹ್ಯ ಮತ್ತು ಆಂತರಿಕ ಸಮಾಜದ ಕಪಿ ಮುಷ್ಟಿಯಲ್ಲಿ ಸಿಕ್ಕಿ ನಲುಗುತ್ತಿರುತ್ತವೆ.

ಸಿದ್ಧಲಿಂಗಯ್ಯನವರ ತಾಯಿ ಮತ್ತು ಅರವಿಂದರ ಅಜ್ಜಿಯವರನ್ನು ಒಟ್ಟಿಗೆ ತಂದು ನೋಡಿದರೆ ಅರವಿಂದರ ತಾಯಿ ಎಲ್ಲಾ ರೀತಿಯಿಂದಲೂ

---

* ಚ.ನ. ಶಂಕರರಾವ್ (೨೦೦೫) ಅವರ ಭಾರತೀಯ ಸಮಾಜ, ಜೈಭಾರತ್ ಪ್ರಕಾಶನ, ಮಂಗಳೂರು ಕೃತಿಯಲ್ಲಿ ಸಮಾಜಶಾಸ್ತ್ರಜ್ಞರಾದ ಎಂ. ಎನ್. ಶ್ರೀನಿವಾಸರ ವಿಚಾರಗಳು

ಗಟ್ಟಿಯಾಗಿ ಕಾಣಿಸುತ್ತಾಳೆ. ದೇವನೂರು ಮಹಾದೇವರವರ ಸಾಕವ್ವನಂತೆ ಕಂಡುಬರುತ್ತಾಳೆ.

ಊರುಕೇರಿಯಲ್ಲಿ ಹೇಳಿಕೊಳ್ಳುವಂತಹ ಸ್ತ್ರೀ ಪಾತ್ರಗಳನ್ನೇನು ಲೇಖಕರು ಹೆಚ್ಚಾಗಿ ತಂದಿರುವುದು ಕಂಡುಬರುವುದಿಲ್ಲ.

ದಲಿತ ಸಮುದಾಯದ ಹೆಣ್ಣುಗಳು ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯವಾಗಿ ಪರತಂತ್ರಗಳಾಗಿರುತ್ತಾಳೆ. ಪುರುಷನ ಸೂತ್ರಕ್ಕೆ ಸಿಕ್ಕಿ ಕುಣಿಯುತ್ತಿರುತ್ತಾಳೆ.

## ಅಧ್ಯಾಯ ನಾಲ್ಕು

# ಈಗೇನ್ ಮಾಡೀರಿ ? ಯಲ್ಲಿ ಹೆಣ್ಣು

ಕನ್ನಡ ಸಾಹಿತ್ಯ ಲೋಕದಲ್ಲಿ ಪುರುಷರೊಂದಿಗೆ ಹೋಲಿಸಿದರೆ ಮಹಿಳೆಯರ ಪಾತ್ರ ಬಹಳ ಕಡಿಮೆ. ಆಧುನಿಕ ಕಾಲ ಘಟ್ಟದಲ್ಲಿ ತಮ್ಮದೇ ಆದಂತಹ ಸಂವೇದನೆಗಳಿಂದಾಗಿ ಭಿನ್ನವಾಗಿ ನಿಲ್ಲುತ್ತಾರೆ. ಅನೇಕ ಕಷ್ಟಗಳನ್ನ ಅನುಭವಿಸಿಕೊಂಡು ಬಂದಿರುವರ ಗುಂಪಿನಲ್ಲಿ ದು. ಸರಸ್ವತಿಯವರೂ ಕೂಡ ಒಬ್ಬರಾಗುತ್ತಾರೆ. ಮೊಟ್ಟಮೊದಲಿಗೆ ದಲಿತ ಮಹಿಳೆಯ ಆತ್ಮಕಥೆಯನ್ನ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ನೀಡಿದ್ದಾರೆ.

ದು. ಸರಸ್ವತಿಯವರ 'ಈಗೇನ್ ಮಾಡೀರಿ' ? ಎನ್ನುವ ಆತ್ಮಕಥೆಯಲ್ಲಿ ನೊಂದ ಮಹಿಳೆಗೆ ಫಲ ಸಿಕ್ಕಾಗ ಬಿಟ್ಟ ನಿಟ್ಟುಸಿರಿನಂತೆ ತೋರುತ್ತದೆ. ಜೊತೆಗೆ ತನಗೆ ಕಷ್ಟ ಕೊಟ್ಟ ಸಮಾಜಕ್ಕೆ ಸವಾಲಿನಂತೆ ಪ್ರಶ್ನಿಸುತ್ತದೆ.

ಗೌರ್ಮೆಂಟ್ ಬ್ರಾಹ್ಮಣ ಮತ್ತು ಊರುಕೇರಿ ಈ ಎರಡು ಆತ್ಮಕಥೆಗಳೊಂದಿಗೆ ತಾಲಿನಿಕವಾಗಿ ನೋಡಿದರೆ ಈಗೇನ್ ಮಾಡೀರಿ ? ಬೇರೆಯದೇ ರೀತಿಯಲ್ಲಿ ಕಾಣಿಸುತ್ತದೆ. ಪುರುಷ ಪ್ರಧಾನ ಸಮಾಜದಲ್ಲಿ ಒಬ್ಬ ಮಹಿಳೆ ಅನುಭವಿಸುವ ನೋವುಗಳನ್ನು ಈ ಆತ್ಮಕಥೆ ವಿವರಿಸುತ್ತಿರುತ್ತದೆ.

ಈ ಆತ್ಮಕಥೆ ಎರಡು ರೀತಿಯಲ್ಲಿ ಮುಖ್ಯವೆನಿಸುತ್ತದೆ. ಮೊದಲನೆಯದು ಒಬ್ಬ ಮಹಿಳೆಯಾಗಿ ಆತ್ಮಕಥೆಯನ್ನು ಕಟ್ಟಿ ಕೊಡುವ ಬಗೆ, ಮತ್ತೊಂದು ಒಬ್ಬ ದಲಿತ ಮಹಿಳೆಯಾಗಿ ಆತ್ಮಕಥೆಯನ್ನು ಕಟ್ಟಿಕೊಡುವ ಬಗೆ.

ಭಾರತದ ಇತಿಹಾಸವನ್ನು ಸ್ತ್ರೀಯರ ದೃಷ್ಟಿಯಲ್ಲಿ ಅಧ್ಯಯನ ಮಾಡಿದರೆ ಮಹಿಳೆಯ ಸ್ಥಾನಮಾನಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಜಗತ್ತಿನ ಎಲ್ಲಾ ಕಡೆಯಲ್ಲಿಯೂ ಒಂದು ಹೆಣ್ಣು ಎರಡನೇ ಹಂತದಲ್ಲಿಯೇ ಬದುಕುತ್ತಿರುತ್ತಾಳೆ. ಈ ರೀತಿಯ ಸಮಸ್ಯೆಗಳಿರುವಾಗ ಒಬ್ಬ ದಲಿತ ಹೆಣ್ಣು ಒಂದೇ ಸಮಯದಲ್ಲಿ ಎರಡು ಒತ್ತಡಗಳಿಗೆ ತುತ್ತಾಗಿರುತ್ತಾಳೆ.

ಒಂದನೆಯದು ತನ್ನ ಸಮುದಾಯಕ್ಕಿಂತ ಹೊರಗಿನ ಪುರುಷ ಸಮಾಜದ ಒತ್ತಡ.

ಎರಡನೆಯದು ತನ್ನ ಸಮುದಾಯುದ ಒಳಗಿರುವ ಪುರುಷ ಸಮಾಜದ ಒತ್ತಡ.

ಒಬ್ಬ ಹೆಣ್ಣು ಬರೆದಿರುವ ಆತ್ಮಕಥೆಯಲ್ಲಿ ಹೆಣ್ಣಿನ ಬದುಕನ್ನ ಅರ್ಥಮಾಡಿಕೊಳ್ಳುವುದು ಸರಳವಾದುದ್ದೇನು ಅಲ್ಲ.

ಈ ಆತ್ಮಕಥೆ ಓದಿದರೆ ಮೊದಲಿಗೆ ತಿಳಿಯುವುದು ಆರ್ಥಿಕವಾಗಿ ಸುಸ್ಥಿತಿಯಲ್ಲಿ ಇರುವ ಲೇಖಕಿಯ ಬದುಕು ಕಂಡುಬರುತ್ತದೆ. ಜೊತೆಗೆ ಮೇಲುವರ್ಗಗಳು ಆಚರಿಸಿಕೊಂಡು ಬಂದಿರುವಂತಹ ಎಲ್ಲಾ ನಿಯಮಗಳು ಕಾಣುತ್ತದೆ.

ಸಾಂಸ್ಕೃತೀಕರಣಕ್ಕೆ ಒಳಗಾಗಿರುವ ಕುಟುಂಬದಂತೆ ಲೇಖಕಿಯ ಕುಟುಂಬವನ್ನು ಕಾಣಬಹುದು.

## ಧಾರ್ಮಿಕವಾಗಿ ಹೆಣ್ಣು

ಒಂದು ಸಾಮಾನ್ಯ ಚಿಕ್ಕ ಹುಡುಗಿಯ ರೀತಿಯಲ್ಲೇ ತನ್ನ ತಾಯಿಯ ಜೊತೆಯಲ್ಲಿ ಸುತ್ತಾಡುತ್ತಾ, ಸಣ್ಣ ಸಣ್ಣ ಪ್ರಶ್ನೆಗಳನ್ನ ಒಂದು ಮಹತ್ವದ ವಿಚಾರಗಳಂತೆ ತನ್ನ ತಾಯಿಯೊಂದಿಗೆ ಚರ್ಚಿಸುವ ಹುಡುಗಿ ಕೊನೆಗೆ ಈಗೇನ್ ಮಾಡೀರಿ ? ಎಂದು ಪ್ರಶ್ನಿಸುವ ಹಂತಕ್ಕೆ ಸಾಗಿರುವ ದಾರಿ ತುಂಬಾ ಕಷ್ಟಕರವಾಗಿರುವಂತಹುದು.

ಮೊದಲೇ ಪ್ರಸ್ತಾಪಿಸಿದಂತೆ ಒಂದು ಚಿಕ್ಕ ಹುಡುಗಿಗೆ ಈ ಲೋಕದ ಸೃಷ್ಟಿಯ ಬಗ್ಗೆ ಇರುವಂತಹ ಪ್ರಶ್ನೆಗಳು ತುಂಬಾ ಗಂಭೀರವಾಗಿರುವಂತಹವು. ಕೆಲವೊಮ್ಮೆ ಅವುಗಳಿಗೆ ಉತ್ತರಿಸುವುದೂ ಕೂಡ ಕಷ್ಟವಾಗುತ್ತದೆ. ಉದಾಹರಣೆಗೆ ನೋಡುವುದಾದರೆ 'ಆ ದೇವ್ರ್‌ಗೆ ನಾವು ಏಳೋದು ಕೇಳುತ್ತಾ ?' ಭಾಗದಲ್ಲಿ ನೋಡಬಹುದು.

ಇಂದು ಹೆಚ್ಚು ಓದಿಕೊಂಡಿರುವಂತಹ ವ್ಯಕ್ತಿಗಳು ಧರ್ಮದ ಹೆಸರಿನಲ್ಲಿ ಜಾತಿಯ ಹೆಸರಿನಲ್ಲಿ ಹಣಗಳಿಸುವ ಮತ್ತು ಪ್ರಸಿದ್ಧಿಯನ್ನು ಪಡೆಯುತ್ತಿರುವಾಗ ಅದನ್ನ ಧಿಕ್ಕರಿಸಿ ಮತ್ತೊಬ್ಬರಿಗೆ ತೊಂದರೆಯನ್ನು ಕೊಡದೆ ತನ್ನ ಪಾಡಿಗೆ ತಾನು ಬದುಕುವುದನ್ನ ಒಂದು ಹೆಣ್ಣು ತಿಳಿದಿರುತ್ತಾಳೆ. ಎಲ್ಲವನ್ನು ನಾಶಮಾಡಿ ಭೂಮಿ ಕೇವಲ ಮನುಷ್ಯನಿಗೆ ಮಾತ್ರ ಎಂದು ಮಾತನಾಡುತ್ತಿರುವಾಗ ಅದಕ್ಕೆ ಭಿನ್ನವಾದಂತಹ ಪ್ರಾಣಿ – ಪಕ್ಷಿ ಪ್ರಪಂಚವನ್ನು ನನ್ನಂತೆಯೆ ಎಂದು ಭಾವಿಸಿ ಬದುಕಬೇಕು ಎಂದು ಸಾರುವಂತಿದೆ.

ತನ್ನ ಪಾಲಿಗೆ ಬಂದಿರುವುದನ್ನೆ ಸಾಕು. ಅದರಲ್ಲಿಯೇ ತೃಪ್ತಿ ಪಡಬೇಕು ಎಂದು ತನ್ನ ಮಗಳಿಗೆ ತಾಯಿ ಕಲಿಸಿಕೊಡುತ್ತಾಳೆ. ಸಂಪತ್ತನ್ನು ಕೇಂದ್ರೀಕರಿಸಿಕೊಂಡು ಬದುಕುತ್ತಿರುವ ಸಮಾಜದ ಮುಂದೆ ಈ ರೀತಿಯ ಮಾತುಗಳು ಇಂದು ಅರ್ಥ ಕಳೆದುಕೊಳ್ಳುತ್ತಿವೆ. ಕೃತಕ ಜೀವನ ಪದ್ಧತಿಯನ್ನ ಬಹಳ ಜನ ಒಪ್ಪಿಕೊಳ್ಳುತ್ತಿದ್ದಾರೆ. ಜೊತೆಗೆ ಅದನ್ನೇ ಸತ್ಯ ಎಂದು ಭಾವಿಸುವವರ ಪರಂಪರೆ ಬೆಳೆಯುತ್ತಿದೆ.

ತನ್ನ ಜೀವನದ ವೇದನೆಗಳನ್ನು ಮನಸ್ಸಿನಿಂದ ಹೊರಗಿಟ್ಟು ಮನಸ್ಸನ್ನು ಉಲ್ಲಾಸದಿಂದಿರಿಸಿಕೊಳ್ಳಬೇಕಾಗುತ್ತದೆ. ಆದುದರಿಂದ ಒಂದು ಶಕ್ತಿಯನ್ನೇ ನಂಬಿಕೊಂಡು ಅದಕ್ಕೆ ತನ್ನೊಳಗಿನ ಎಲ್ಲಾ ಮಾತುಗಳನ್ನ ಸಮರ್ಪಿಸುತ್ತಾ ಲೇಖಕಿ ಬದುಕುತ್ತಿರುತ್ತಾಳೆ.

ಮನುಷ್ಯ ಸಂಬಂಧಗಳನ್ನ ಒಂದು ಹೆಣ್ಣು ನೋಡುವುದಕ್ಕೂ ಒಂದು ಗಂಡು ನೋಡುವುದಕ್ಕೂ ಅನೇಕ ವ್ಯತ್ಯಾಸಗಳಿರುತ್ತವೆ. ಹೆಣ್ಣು ಸಣ್ಣ ಸಣ್ಣ ವಿಷಯಗಳನ್ನ ತುಂಬಾ ಗಂಭೀರವಾಗಿ ತೆಗೆದುಕೊಳ್ಳುತ್ತಾಳೆ. ಈ ರೀತಿಯ ಸಂಬಂಧ ಒಂದು ಹೆಣ್ಣು ಮಗಳು ತವರು ಮನೆಗೆ ಬಂದರೆ ಅವಳ ತವರಿಗೆ ಎಲ್ಲಿಲ್ಲದ ಸಂತೋಷ, ಅವಳು ತವರು ಬಿಟ್ಟು ಹೊರಟರೆ ಎಲ್ಲಾ ಕಡೆಯಲ್ಲಿ ಮೌನವೇ ಮನೆಮಾಡಿರುತ್ತದೆ. ಆದುದರಿಂದ ಲೇಖಕಿ ಮತ್ತು ಅವರ ತಾಯಿ ತವರಿಗೆ ಬರುವಾಗ ದಾರಿಯುದ್ದಕ್ಕೂ ಕಂಡ ಕಂಡ ಜನರೊಂದಿಗೆ ಮಾತನಾಡುತ್ತ ಕಷ್ಟ ಸುಖಗಳನ್ನ ಕೇಳುತ್ತ ಮನೆಯನ್ನ ತಲುಪುತ್ತಿದ್ದರು. ಲೇಖಕಿಯ ಅಜ್ಜಿಯಂತು ಕರುಣಾಮಯಿಯಾಗಿ ಕಾಣಿಸುತ್ತಾಳೆ. ಆದುದರಿಂದಲೆ ಅವಳನ್ನ ದೇವಿಯನ್ನಾಗಿ ನೋಡುತ್ತಾರೆ.

"ಈ ಅವ್ವನ ಕನ್ನಡ್ಕ ತಗುದ್ರೆ ಇಲ್ಲ ಗುಡಿವಳ್ಗಿರೊ ವನ್ನಮ್ಮಂಗೆ ಕನ್ನಡ್ಕ ಆಕಿದ್ರೆ ಇಬ್ರಿಗೂ ವ್ಯತ್ಯಾಸನೆ ಇಲ್ಲ. ಇಲ್ಲ ಇಲ್ಲ ವ್ಯತ್ಯಾಸ ಐತೆ ವನ್ನಾದೇವಿ ಯಾವಾಗ್ಲು ಗುಡಿವಳ್ಗೆ ಇರ್ತಾಳೆ. ಪರ್ಸೆದಿನ ಮಾತ್ರ ಈಚ್ಗೆ ಬತ್ತಳೆ. ಅವ್ವ ಓಡಾಡೊ ಮಾತಾಡೊ ವನ್ನಾದೇವಿ."

ಈ ಸಂದರ್ಭವನ್ನ ಸೂಕ್ಷ್ಮವಾಗಿ ಗಮನಿಸಿದರೆ ತನ್ನ ಅಜ್ಜಿಯನ್ನ ದೇವತೆಯೊಂದಿಗೆ ಹೋಲಿಸಿ ನೋಡಿ ತಕ್ಷಣ ಅದು ಸರಿಯಲ್ಲ ಎನಿಸಿ ನನ್ನ ಅಜ್ಜಿ ದೇವತೆಗಿಂತ ಮಿಗಿಲಾದವಳು ಎನ್ನುವ ತೀರ್ಮಾನಕ್ಕೆ ಲೇಖಕಿ ಬರುತ್ತಾಳೆ.

ಒಬ್ಬ ಮುಗ್ಧ ಹುಡುಗಿ ಯೌವ್ವನದ ಸ್ಥಿತಿಗೆ ಬಂದಾಗ ಅವಳೊಳಗೆ ಹುಟ್ಟುವ ಭಯ ವಿಚಿತ್ರವಾಗಿರುವಂತಹದು.

ಜಗತ್ತಿನಲ್ಲಿ ದೇವರ ಹುಟ್ಟಿಗೆ ಮೂಲ ಕಾರಣವಾಗಿರುವಂತಹದು

ಭಯ. ಲೇಖಕಿಯ ದೇಹ ರಚನೆಯಲ್ಲಿ ವ್ಯತ್ಯಾಸಗಳಾಗತೊಡಗಿದಾಗ ಸಿಟ್ಟು ಮಾಡಿಕೊಳ್ಳುವುದೆ ಶಿವನ ಮೇಲೆ ದಿನನಿತ್ಯ ಪೂಜೆ ಮಾಡಿದರೂ ನನಗೇಕೆ ಈ ರೀತಿಯ ಕಷ್ಟಕೊಟ್ಟೆ ಎನ್ನುವುದೇ ಅವಳ ಪ್ರಶ್ನೆಯಾಗಿರುತ್ತದೆ. ಚಿಕ್ಕವರಿರುವಾಗ ನಮಗೆ ದೇವರ ಬಗ್ಗೆ ಇರುವ ಕಲ್ಪನೆಗಳೆ ಬೇರೆ. ಆದರೆ ನಾವುಗಳು ಬೌದ್ಧಿಕವಾಗಿ ಬೆಳೆದಂತೆಲ್ಲ ನಮ್ಮೊಳಗೆ ಹುಟ್ಟುವ ತರ್ಕಗಳೇ ಬೇರೆ. ಈ ಅಂಶಗಳನ್ನೆ ಭಯ ಎನ್ನುವ ಭಾಗದಲ್ಲಿ ಕಾಣಬಹುದು. ಲೇಖಕಿಯ ತಾಯಿಗೆ ಆರೋಗ್ಯ ಸರಿಯಲ್ಲವೆಂದು ತಿಳಿದಾಗ ಅವಳೊಳಗೆ ಹುಟ್ಟುವ ಕಲ್ಪನೆಗೆ ನೇರವಾಗಿ ದೇವರನ್ನೆ ಪ್ರಶ್ನಿಸುತ್ತಾಳೆ. ಮನೆಯಿಂದ ಹೊರಗೆ ಹೊರಟರೆ ಅವಳು ಶಿವನಿಗೆ ನಮಸ್ಕಾರ ಹೊಡೆದು ಗೇಟಿನವರೆಗೂ ಬೆನ್ನು ತಿರುಗಿಸದೆ ಹೋಗಿ ಮುಂದಿನ ಕೆಲಸಕ್ಕೆ ಕೈ ಹಾಕುತ್ತಿದ್ದಳು. ಅವಳು ಆಸ್ಪತ್ರೆಗೆ ಹೋಗುವ ದಿನವೂ ಕೂಡ ಅದೇ ರೀತಿ ದೇವರಿಗೆ ನಮಸ್ಕಾರ ಮಾಡಿ ದೇವರಿಗೆ ಸವಾಲು ಹಾಕುತ್ತಾಳೆ.

“ಆಹಾ ! ಶಿವ್ನೆ ಇದೇನಪ್ಪಾ ನಿನ್ ಪರೀಕ್ಷೆ? ನಿನ್ನಾಟ ನಾನರ್‍ಯೆ ಕೊನೆ ಉಸಿರಿರೊತಂಕ ಈ ಕೈಯಾರೆ ನಿನ್ನ ನೆತ್ತಿ ಮ್ಯಾಲೆ ಎರ್‍ಡ್ ಊವಾಕ್ಬೇಕು ಅಂದ್ಕಂಡಿದ್ದೆ. ಈಗ ಆ ಕೈನೆ ಸ್ವಾದೇನಿಲ್ದಂಗೆ ಮಾಡಕೊಂಟಿದ್ದಿಯಾ ? ನಿನ್ನಾಟ ನಡೀದು ನೋಡೆ ಬಿಡ್ತಿನಿ ನಾನು. ನೀನ್ ಗೆಲ್ತಿಯೋ ನಾನ್ ಗೆಲ್ತೀನೋ ಅಂತ ಅಂದವಳೇ ಧಡಕ್ಕನೆದ್ದು ವಸಲಿಗೆ ಮುಗ್ದು ಸಾರಿ ಮನೆ ಕಡೆ ಜ್ವಾಪಾನ ಕಣಪ್ಪ, ದೇವ್ರದೀಪ ಆರ್ದಂಗೆ ನೋಡ್ಕ ಅಂದು ರಾಜು (ನಾಯಿ) ತಲೆ ಸವರಿ ರಾಜಪ್ಪ ಎಚ್ರವಾಗಿರೋ ಅಂದವಳೆ ಹೊಸಲಿಗೆ ಬೆನ್ನು ತಿಗುಗಿಸಿ ಹೊರಟೇ ಬಿಟ್ಟಳು.”

ಅನೇಕ ಸಂದರ್ಭಗಳಲ್ಲಿ ದೇವರಿಗೆ ಮುಖಾ ಮುಖಿಯಾಗುವ ಸಂದರ್ಭಗಳು ಬರುತ್ತಿರುತ್ತವೆ. ಅಂತಹ ಸಂದರ್ಭಗಳಲ್ಲಿ ಒಂದು ಹೆಣ್ಣು ಯಾವುದೇ ಮುಲಾಜಿಲ್ಲದೆ ದೇವರಿಗೆ ಸವಾಲಾಗುತ್ತಾಳೆ. ನನ್ನ ಭಕ್ತಿಯ ಮುಂದೆ ನೀನು ನಿಲ್ಲಲಾರೆ. ಒಂದಲ್ಲಾ ಒಂದು ದಿನ ನಾನೇ ಗೆಲ್ಲುವೆ ಎನ್ನುವ ಛಲವಿದ್ದರೂ, ಅರಿವಿಲ್ಲದೆ ಸೋತು ಕಾಲದಲ್ಲಿ ಲೀನವಾಗುತ್ತಾಳೆ. ಬಹಳಷ್ಟು ಜನರು ಬಲು ಬೇಗ ಬರುವ ಸಾವನ್ನ ನಿರಾಕರಿಸುತ್ತಲೇ ಇರುತ್ತಾರೆ.

ಆದುದರಿಂದ ನೀನು ನನ್ನನ್ನು ಉಳಿಸು ಅದರಿಂದ ನಿನಗೇನೇ ಲಾಭ ನಿನಗೆ ಹೂವುಗಳನ್ನ ಅರ್ಪಿಸಲಿಕ್ಕಾದರೂ ನನಗೆ ಆರೋಗ್ಯ ಕೊಡು ಎಂದು ಕೇಳುವುದರ ಹಿಂದೆ ತನ್ನ ಬದುಕುವ ಆಸೆಯನ್ನು ಮುಚ್ಚಿರುತ್ತಾರೆ. ಹೊಸಲಿಗೆ ಬೆನ್ನು ತಿರುಗಿಸಿ ಹೋದ ತಾಯಿ ಮತ್ತೆ ಬಂದು ಈ ಲೋಕದ ಸಂಬಂಧವನ್ನ ಕಳೆದುಕೊಂಡು ತನ್ನ ಜೀವನವನ್ನೆ ಶಿವನಿಗಾಗಿ ಮೀಸಲಿಟ್ಟು ಆಶ್ರಮಕ್ಕೆ ಹೋಗಿ ಪ್ರಾರ್ಥನೆ ಮಾಡುತ್ತಾ ದೇವರನ್ನ ಪೂಜಿಸುತ್ತಾ, ಜನರಿಂದ ಒಂದೊಂದು ಪೈಸೆಯನ್ನ ಕೂಡಿಸಿ ಕಟ್ಟಿಸಿದ ಆಶ್ರಮವನ್ನು ನಡೆಸುತ್ತಾ ಬದುಕು ಕಳೆಯುತ್ತಿದ್ದ ಲೇಖಕಿಯ ತಾಯಿಯ ಮುಂದೆ ಶಿವ ಸಣ್ಣವನಾಗುತ್ತಾನೆ. ತಾನು ಆಸ್ಪತ್ರೆಯಲ್ಲಿ ಇದ್ದಾಗಲೂ ಕೂಡ ದೇವರ ಫೋಟೋಗೆ ಹೂಮುಡಿಸುತ್ತಲೆ ಈ ಲೋಕದಿಂದ ಜಾರಿ ಹೋಗಿರುತ್ತಾಳೆ.

ಈಗೇನ್ ಮಾಡೀರಿ ? ಆತ್ಮಕಥೆಯ ಧಾರ್ಮಿಕ ಬದುಕು ಹೆಚ್ಚು ವಿಸ್ತಾರವಾಗಿರದೆ ಮಧ್ಯಮ ವರ್ಗದ ಮಹಿಳೆ ಬದುಕಿನ ರೀತಿಯಲ್ಲೇ ಮೂಡಿಬಂದಿದೆ. ಸಾಮಾನ್ಯ ದಲಿತ ಸಮುದಾಯದಲ್ಲಿ ಬದುಕುವ ಜನರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿರುವಂತೆ ಕಾಣುತ್ತಾದೆ. ಈ ಸ್ಥಿತಿಗೆ ಕಾರಣ ಅವರ ಆರ್ಥಿಕ ವ್ಯವಸ್ಥೆ ಮಧ್ಯಮ ವರ್ಗದ ಕುಟುಂಬಗಳಿದ್ದಂತೆ ಇದ್ದುದರಿಂದ ಸಹಜವಾಗಿ ಅವರ ಆಚರಣೆಗಳೂ ಸಹ ಮಧ್ಯಮ ಕುಟುಂಬಗಳನ್ನ ಹೋಲುತ್ತಿರುತ್ತವೆ.

ಈ ಆತ್ಮಕಥೆಯಲ್ಲಿ ಬಂದಿರುವ ದೇವರೆಂದರೆ ಅದು ಶಿವ. ಅವನನ್ನು ಬಿಟ್ಟರೆ ಒಂದು ಕಡೆ ವನ್ನಮ್ಮ ದೇವಿ ಪ್ರಸಂಗ ಬರುತ್ತದೆ. ಆ ಒಂದು ಪ್ರಸಂಗವನ್ನು ಹೊರತುಪಡಿಸಿ ಶಿವನನ್ನು ಬಿಟ್ಟು ಬೇರೊಂದು ದೇವತೆಯ ಪ್ರಸಂಗಗಳು ಕಾಣುವುದಿಲ್ಲ.

## ಸಾಮಾಜಿಕವಾಗಿ ಹೆಣ್ಣು

ಅನೇಕ ಸಮಯದಲ್ಲಿ ಮನುಷ್ಯ ತನ್ನದಲ್ಲದ ವಸ್ತುವಿಗೆ ಆಸೆ ಪಡುತ್ತಿರುತ್ತಾನೆ. ಆ ರೀತಿಯ ಅವಕಾಶಗಳು ಸಿಕ್ಕಾಗ ಅದನ್ನ ಸಂಪೂರ್ಣವಾಗಿ ಬಳಸಿಕೊಳ್ಳುತ್ತಿರುತ್ತಾರೆ. ಆದರೆ ಎಷ್ಟು ಜನ ತನ್ನದಲ್ಲದ ವಸ್ತುವನ್ನು ಯಾವುದೇ ಮುಲಾಜಿಲ್ಲದೆ ತಿರಸ್ಕರಿಸುತ್ತಾರೆ ?

ಈ ರೀತಿಯ ಮನಸ್ಸಿನ ಸ್ಥಿತಿಗಳಿಗೆ ವಿರುದ್ಧವಾಗಿ ಒಂದು ಸಾಮಾನ್ಯ ಹೆಣ್ಣು ಈ ಆತ್ಮಕಥೆಯಲ್ಲಿ ಮೂಡಿಬಂದಿದ್ದಾಳೆ.

ಲೇಖಕಿಯ ತಾಯಿ ತನ್ನ ಮಗಳಿಗೆ ಸಿಕ್ಕ ಐದು ಪೈಸೆಯನ್ನು ಸಹ ನಿರಾಕರಿಸಿ ಅದನ್ನ ದೇವ್ರುಂಡಿಗಾಕು, ಎಂದು ಹೇಳುತ್ತಾಳೆ. ಅದೇ ಸಂದರ್ಭದಲ್ಲಿ "ಉಣ್ಣ ಅನ್ನನೂವೆ ಒಂದ್ ತುತ್ ಜಾಸ್ತಿ ಉಂಡ್ರೆ ಇನ್ನೊಬ್ರನ್ನ ಕಿತ್ಕಂಡಂಗೆ, ನಮ್ ಪಾಲಿಂದುಕಲ್ದೆ ಇನ್ನೊಬ್ರದ್ಕೆ ಕೈ ಆಕ್‌ಬಾರದ್ದು, ಸಿವ ಮೆಚ್ಚಲ್ಲ" ಎಂದು ಹೇಳುತ್ತಾಳೆ.

ಈ ಮೌಲ್ಯದ ಮುಂದೆ ಅನೇಕ ಜನರು ಸೋತಿರುತ್ತಾರೆ. ಇಂದು ಸಿಗುವ ಸಂಪನ್ಮೂಲವನ್ನೆಲ್ಲ ತಮ್ಮ ಮುಂದಿನ ಪೀಳಿಗೆಗಳಿಗೂ ಸಂಗ್ರಹಿಸುವ ಮನಸ್ಸಿನ ಸ್ಥಿತಿಗಳಿರುವಾಗ ಲೇಖಕಿಯ ತಾಯಿಯ ಬದುಕು ಭಿನ್ನವಾಗಿ ನಿಲ್ಲುತ್ತದೆ. ಒಂದು ಹೆಣ್ಣು ಪ್ರಾಮಾಣಿಕವಾಗಿ ಬದುಕಲು ಪ್ರಯತ್ನಿಸಿದರೆ, ಆಕೆಯೊಂದಿಗೆ ಒಂದು ಕುಟುಂಬವೇ ಅರಿವಿಲ್ಲದೆ ಪ್ರಮಾಣಿಕತೆಯ ಕಡೆ ಸಾಗುತ್ತಿರುತ್ತದೆ. ಒಂದು ಕುಟುಂಬದ ಜವಾಬ್ದಾರಿ ಗಂಡಿಗಿಂತ ಹೆಣ್ಣಿನ ಮೇಲೆ ಹೆಚ್ಚಿರುತ್ತದೆ. ಹೆಣ್ಣನ್ನ ಮಾರುಕಟ್ಟೆಯ ಸರಕಿನಂತೆ ನೋಡುತ್ತಿರುವ ಈ ಸಂದರ್ಭದಲ್ಲಿ ಎಷ್ಟೋ ವೇಳೆ ಹೆಣ್ಣಿನ ಮುಂದೆ ಸಂಬಂಧಗಳೇ ನಾಶವಾಗುತ್ತಿರುತ್ತವೆ. ಒಂದು ಹೆಣ್ಣು ಮಗುವನ್ನು ತನ್ನ ಮೊಮ್ಮಗಳಂತೆ ಕಾಣುತ್ತಿದ್ದವರು, ಮಗಳಂತೆ ಕಾಣುತ್ತಿದ್ದವರು, ಆ ಹೆಣ್ಣು ಪ್ರಾಯಕ್ಕೆ ಬಂದಾಗ ಆ ಜನರೆ ಆಕೆಯನ್ನ ಕಾಮುಕ ದೃಷ್ಟಿಯಿಂದ ನೋಡುವುದನ್ನ ಗಮನಿಸಬಹುದು. ಪ್ರಾಯಕ್ಕೆ ಬರುವುದಕ್ಕಿಂತ ಮುಂಚೆ ಯಾವ ಮುಲಾಜಿಲ್ಲದೆ ಯಾವ ಭಯವಿಲ್ಲದೆ

ಆಟವಾಡುತ್ತಿದ್ದವಳೀಗ ಸಮಾಜವನ್ನೇ ಅನುಮಾನಿಸುವ ರೀತಿಯಲ್ಲಿ ಬದುಕುತ್ತಿರುತ್ತಾಳೆ.

ಒಂದು ಮಧ್ಯಮ ಸ್ಥಿತಿಯಲ್ಲಿರುವ ಹೆಣ್ಣು ಕಲಿಯುವುದಕ್ಕಾಗಿ ಕಾಲೇಜಿಗೆ ಹೋದರೆ ಅಲ್ಲಿ ಮುಖಾಮುಖಿಯಾಗುವ ಬದುಕುಗಳೇ ಬೇರೆ. ಹೊರಗಿನ ಶೃಂಗಾರಕ್ಕೆ ಮಾನ್ಯತೆ ನೀಡುವ ಜಾಗ ಕಾಲೇಜು. ಕಾಲೇಜಿನ ಮುಖವನ್ನೇ ನೋಡದ ಹೆಣ್ಣು ಹೇಳುವ ಬದುಕಿಗೂ, ಕಾಲೇಜಿನ ಬದುಕಿಗೂ ಸಾಕಷ್ಟು ವ್ಯತ್ಯಾಸವಿರುತ್ತದೆ. ಕಾಲೇಜಿನ ಬದುಕು ಫ್ಯಾಶನ್ನಿಗೆ ಹೆಚ್ಚು ಮಹತ್ವ ನೀಡುತ್ತದೆ. ಬಹಳಷ್ಟು ವಿದ್ಯಾರ್ಥಿಗಳು ಫ್ಯಾಶನ್‌ಗಾಗಿಯೆ ಕಾಲ ಕಳೆಯುತ್ತಿರುತ್ತಾರೆ. ಇಂತಹ ಸಂದರ್ಭಗಳಲ್ಲಿ ಫ್ಯಾಶನ್ ಪ್ರಪಂಚದಿಂದ ದೂರವಿರುವ ಲೇಖಕಿಗೆ ಕಾಲೇಜಿನ ಬದುಕು ತುಂಬಾ ವಿಚಿತ್ರವಾಗಿ ಕಾಣಿಸುತ್ತಿರುತ್ತದೆ.

"ಚೆನ್ನಾಗಿ ಕಾಣೋಕೆ ಇಷ್ಟೆಲ್ಲಾ ಸರ್ಕಸ್ ಮಾಡ್ಬೇಕಾ ? ಚೆನ್ನಾಗಿ ಯಾಕ್ ಕಾಣ್ಬೇಕು ? ಯಾಕೆ ಅನ್ನೋದು ನಿಧಾನವಾಗಿ ತಿಳಿತಾ ಹೋಯ್ತು ಚೆನ್ನಾಗಿರೊ ಹುಡ್ಗಿರ್ನ ಹುಡುಗ್ರು ಮಾತಾಡ್ಸೋರು, ಸುತ್ತಾಡೋರು, ಕ್ಯಾಂಟಿನಲ್ಲಿ, ಕಾರಿಡಾರ್‌ನಲ್ಲಿ ರಸ್ತೆಯಲ್ಲಿ ನಗ್ತ ನಗ್ತ ಮಾತಾಡ್ಸೋರು, ಹುಡುಗೀರು ನಗ್ತ ನಗ್ತ ಇರೋರು ಅವರ ಹತ್ರ ಮಾತಾಡೊವಾಗ ಮೇಷ್ಟ್ರುಗಳ ಟೋನ್ ಬದ್ಲಾಗೋದು ತೆಳ್ಳಗಿರೋ ಸೀರೆ ಉಟ್ಕೊಂಡು, ಎತ್ತರದ ಚಪ್ಲಿ ಹಾಕ್ಕೊಂಡು, ಕೂದ್ಲುನ ಒಂದು ಕೈನಲ್ಲಿ ಎತ್ಕೊಂಡು, ಕೆಂಪನೆ ಲಿಪ್‌ಸ್ಟಿಕ್ ಹಚ್ಚಿದ ತುಟಿಯನ್ನು ಅಗಲಿಸಿ, ಸ್ವಲ್ಪ ಹಲ್ ಕಾಣುವಷ್ಟು ನಗ್ತಾ ಬರ್ತಾ ಇದ್ರೆ ಆ ಹುಡ್ಗಿ, ಎಲ್ಲರ ಕಣ್ಣು ಅವಳತ್ತ ಅವಳು ಸೌಂದರ್ಯದ ರಾಶಿನೂ ಆಗಿದ್ಲು, ಯಾವ ಪ್ರೋಗ್ರಾಂನಲ್ಲಿ ಮುಂದಿನ ಸಾಲಿನಲ್ಲಿ ಕೂತ್ಕೋಳೋಳು ಗೆಸ್ಟ್ ಆಗಿ ಬರ್ತಾ ಇದ್ದ ದೊಡ್ಡ ಆಟಗಾರರು, ಪ್ರತಿಷ್ಠಿತ ವ್ಯಕ್ತಿಗಳೂ ಅವಳನ್ನು ನೋಡೋರು."

ಈ ರೀತಿಯ ಕೃತಕ ಜೀವನ ಆ ವಯಸ್ಸಿನಲ್ಲಿ ಸಹಜವಾಗಿ ಮೂಡುವಂತಹದು. ಕಾಲೇಜಿನ ಕೃತಕ ಬದುಕನ್ನು ಸತ್ಯ ಎಂದು ನಂಬಿರುತ್ತಾಳೆ. ಮಧ್ಯಮ ಕುಟುಂಬದಲ್ಲಿ ಬದುಕುವ ಹೆಣ್ಣಿಗೆ ಅದೇ ಮುಖ್ಯವಾಗಿರುತ್ತದೆ.

ಇಂದಿನ ಸಮಾಜದ ವ್ಯವಸ್ಥೆಯಲ್ಲಿ ಹೆಣ್ಣಿಗೆ ಆಧುನಿಕ ಸಮಸ್ಯೆಗಳು ಪ್ರಾರಂಭವಾಗುತ್ತಿವೆ. ಓದಿಕೊಂಡು ಕಛೇರಿಗಳಲ್ಲಿ ಕೆಲಸ ಮಾಡುವ ಮಹಿಳೆಯರು ಕೆಲವು ಸಮಸ್ಯೆಗಳಿಗೆ ಮುಖಾಮುಖಿಯಾಗುತ್ತಿದ್ದಾರೆ ಎನ್ನುವುದನ್ನ ಲೇಖಕಿಯರ ಬದುಕಿನಲ್ಲಿ ನೋಡಬಹುದು.

ಬ್ಯಾಂಕಿನಲ್ಲಿ ಕೆಲಸ ಮಾಡಲು ಪ್ರಾರಂಭಿಸಿದ ಲೇಖಕಿ ಕೆಲಸ ಮಾಡುತ್ತಲೆ ತನಗೆ ತಿಳಿಯದೆ ಒಂದು ದೊಡ್ಡ ಸುಳಿಗೆ ಸಿಲುಕಿಕೊಂಡಿರುತ್ತಾಳೆ.

ತನ್ನ ಜೊತೆಯಲ್ಲಿ ಕೆಲಸ ಮಾಡುತ್ತಿದ್ದ ಮ್ಯಾನೇಜರ್ ಮತ್ತು ಕ್ಯಾಶಿಯರ್ ಏನೂ ಹೆದರಬೇಡಿ ಎಂದು ಹೇಳುತ್ತಲೆ ಲೇಖಕಿ ಬರೆಯುತ್ತಿದ್ದ ಅಕೌಂಟ್ ಪುಸ್ತಕದಲ್ಲಿನ ಅಂಕಿ ಸಂಖ್ಯೆಗಳು ಬದಲಾಗುತ್ತಿದ್ದವು. ಸೊನ್ನೆಗಳು ಹೆಚ್ಚಾಗುತ್ತಿದ್ದವು. ಬರೆದ ಅಂಕಿ ಅಂಶಗಳು tally ಆಗದೆ ಪರದಾಡುವಾಗ ಕ್ಯಾಶಿಯರ್ ನಾನು tally ಮಾಡ್ತೀನಿ. ನೀವು sign ಮಾಡಿ ಎಂದು ವಿನಯದಿಂದ ಹೇಳುತ್ತಲೇ ಮೋಸ ಮಾಡುತ್ತಿದ್ದ. ಈ ಸಂಚಿನ ಫಲದಿಂದ ಲೇಖಕಿ ಒಂದು ದೊಡ್ಡ ಸುಳಿಗೆ ಸಿಲುಕಬೇಕಾಯಿತು.

ಒಂದು ತಿಂಗಳು ಕೆಲಸಕ್ಕೆ ರಜೆ ಹಾಕಿ ಊರಿಗೆ ಹೋಗಿದ್ದಾಗ, ತಕ್ಷಣವೆ ಬಂದು ಕೆಲಸಕ್ಕ report ಮಾಡಿಕೊಳ್ಳಬೇಕೆಂದು ಸೂಚನೆ ಬಂತು. ತಕ್ಷಣವೆ ಆಫೀಸಿಗೆ ಹೋದರೆ ಆಫೀಸಿನ ತುಂಬಾ ಜನ ಆಡಿಟರ್‌ಗಳು ಸೀಲು ಮಾಡಿರುವ ಬೀರುಗಳು, ಎಲ್ಲಾ ಕಡೆಯೂ ಅಕೌಂಟ್ ಪುಸ್ತಕಗಳು ಚಲನ್ ಬಂಡಲ್‌ಗಳು ಈ ರೀತಿಯ ಬೆಳವಣಿಗೆ ಯಾವುದಕ್ಕಾಗಿ ಎಂದು ಲೇಖಕಿಯವರಿಗೆ ತಿಳಿಯಲಿಲ್ಲ. ನಿಧಾನವಾಗಿ ಅಲ್ಲಿ ಆಗುತ್ತಿರುವ ಬದಲಾವಣೆಯನ್ನು ಗ್ರಹಿಸಿದ ಮೇಲೆ ತಿಳಿಯಿತು. ಬ್ಯಾಂಕಿನಲ್ಲಿ ಅದೆಷ್ಟೊ ಕೋಟಿ ಹಣದ ಅವ್ಯವಹಾರ ನಡೆದಿದೆ ಎಂದು ಆ ಅವ್ಯವಹಾರದ ಸುಳಿಗೆ ಲೇಖಕಿಯರೇ ಸಿಲುಕಿಕೊಂಡು ಪೋಲೀಸ್ ಠಾಣೆಯಲ್ಲಿ ವಿಚಾರಣೆಗೆ ಒಳಗಾಗಿ ಜೈಲಿನಲ್ಲಿಯೂ ಬದುಕಬೇಕಾಯಿತು. ಇದರ ಜೊತೆಗೆ ಅಣ್ಣನೇ ಇವರ ಸಹಾಯಕ್ಕೆ ಬರದೆ ನಿರಾಕರಿಸಿದ ತನ್ನ ತಂದೆಯನ್ನು ನೋಡಲು ಸಹ ಬಿಡಲಿಲ್ಲ. ಕೊನೆಗೆ arrest ಆಗಿ ಜೈಲ್ ಸೇರಬೇಕಾಯಿತು. arrest ಆಗಿದ್ದರೂ ತಾನಿರುವ ಸ್ಥಿತಿ ಅವರಿಗೆ ತಿಳಿದಿರಲಿಲ್ಲ.

ಜೈಲಿನ ಬದುಕು ವಿಚಿತ್ರವಾಗಿರುವುವಂತಹದು ಅಲ್ಲಿದ್ದ ಮಹಿಳೆಯರು ಲೇಖಕಿಯನ್ನ ಒಬ್ಬ ವೇಶ್ಯೆ ಎಂದು ತಿಳಿದು ಪ್ರಶ್ನಿಸುತ್ತಾರೆ. ಜೈಲಿನಲ್ಲಿದ್ದ ಕೆಟ್ಟ ವ್ಯವಸ್ಥೆಯನ್ನು ಕಂಡಂತಹ ಲೇಖಕಿ ಯಾರೊಂದಿಗೂ ಮಾತನಾಡದೆ ಮೂಗಿಯ ರೀತಿಯಲ್ಲಿ ಒಂಟಿಯಾಗಿ ಕುಳಿತು ಕಾಲ ಕಳೆಯುವಂತಾಯಿತು.

ಲೇಖಕಿಯರ ತಂದೆ ಕಷ್ಟಪಟ್ಟು ಬೇಲ್ ಮೊಲೆ ತನ್ನ ಮಗಳನ್ನ ಬಿಡಿಸಿಕೊಂಡರು.

ಲೇಖಕಿಯ ಬದುಕನ್ನ ಸೂಕ್ಷ್ಮವಾಗಿ ಗುರುತಿಸಿದರೆ ನಮಗೆ ತಿಳಿಯುವುದು ಪುರುಷ ಪ್ರಧಾನ ಸಮಾಜದ ಪ್ರತಿನಿಧಿಗಳಂತೆ ಕಾಣುವ ಮ್ಯಾನೇಜರ್ ಮತ್ತು ಕ್ಯಾಶಿಯರ್‌ಗಳ ಬಲೆಗೆ ಲೇಖಕಿಯವರು ಸಿಲುಕಿ ನರಳುತ್ತಾರೆ. ಲೇಖಕಿಯರ ಮನೆಯಲ್ಲಿ ಎಲ್ಲರೂ ಓದಿಕೊಂಡಿರುವಂತಹವರು ಜೊತೆಗೆ ಸಮಾಜದಲ್ಲಿ ನಡೆಯುತ್ತಿರುವ ಶೋಷಣೆಯ ವಿರುದ್ಧ ಹೋರಾಡುವ ಚಳವಳಿಗಳ ಸಂಪರ್ಕವಿದ್ದಂತಹ ಲೇಖಕಿಯವರಿಗೆ ಈ ರೀತಿಯ ತೊಂದರೆಗಳು ಬರುವಂತೆ ಮಾಡುವ ಪುರುಷ ಸಮಾಜದ ಸಂಚು ಒಬ್ಬ ಸಾಮಾನ್ಯ ಮಹಿಳೆಯ ಬದುಕನ್ನ ಸುಂದರವಾಗಿ ಕಾಣುತ್ತದೆ ಎಂದು ತಿಳಿದುಕೊಳ್ಳುವುದಾದರು ಹೇಗೆ ? ಎನ್ನುವ ಪ್ರಶ್ನೆ ಕಾಡುತ್ತಿರುತ್ತದೆ.

ಈ ರೀತಿಯ ಅನ್ಯಾಯಕ್ಕೆ ಸಿಲುಕಿಕೊಂಡವರು ಯಾರಿಗೂ ತಿಳಿಯದಂತೆ ಮರೆಯಾಗಿಬಿಡುತ್ತಾರೆ. ಕಾರಣ ಪುರುಷ ಸಮಾಜದ ಸ್ವರಚಿತ ಕುತಂತ್ರಗಳ ಮುಂದೆ ಸಾಮಾನ್ಯ ಮಹಿಳೆಯರು ಜೈಸಲು ಕಷ್ಟವಾಗುತ್ತದೆ. ಇಂತಹ ಸಂದರ್ಭದ ನಡುವೆಯೂ ಲೇಖಕಿ ತಾನು ತಪ್ಪು ಮಾಡಿಲ್ಲ ಎನ್ನುವುದನ್ನು ಸಾಬೀತುಪಡಿಸಲು ಹೋರಾಟ ಮಾಡುತ್ತಾರೆ. ಕಂಡ-ಕಂಡವರ ಮುಂದೆ ಕೈಜೋಡಿಸುತ್ತಾ ತಾನು ತಪ್ಪು ಮಾಡಿಲ್ಲ ಎಂದು ಸಾರಬೇಕಾಗುತ್ತದೆ. ಲೇಖಕಿಯ ಜೊತೆಯಲ್ಲೆ ಅವರ ತಂದೆ ದೊಡ್ಡ ದೇಹವನ್ನು ಹಿಡಿಗಾತ್ರ ಮಾಡಿ ತಲೆಬಾಗಿ ಎರಡೂ ಕೈಗಳನ್ನು ಎದೆಯ ಮೇಲಿರಿಸಿ ಸಾರ್ ನನ್ನ ಮಗಳು ತುಂಬಾ innocent ಸಾರ್. ಒಬ್ಬರ ವಸ್ತುಗೆ ಕೈ ಹಾಕೋಳಲ್ಲ. ಅವಳನ್ನು ಕಷ್ಟಕ್ಕೆ ಸಿಕ್ಕಿಸಿದ್ದಾರೆ. ದಯವಿಟ್ಟು ಕರುಣೆ ತೋರಿ ಈ

ಕೇಸಿನಿಂದ ಬಿಡುಗಡೆ ಮಾಡ್ಸಿ ಸಾರ್ ಎಂದು ದಯನೀಯವಾಗಿ ಬೇಡಿಕೊಳ್ಳುತ್ತಾರೆ.

ಎಲ್ಲರಿಂದಲೂ ಕೈ ಮುಗಿಸಿಕೊಳ್ಳುತ್ತಿದ್ದ ಲೇಖಕಿಯ ತಂದೆ, ತನ್ನ ಮಗಳ ಸಲುವಾಗಿ ತಲೆ ಬಗ್ಗಿಸಿ ಬೇಡಿಕೊಳ್ಳುವುದನ್ನು ನೋಡುತ್ತಿದ್ದ ಮಗಳು ಅಪ್ಪನೆದಿರು ಕೂಗಿ ನಾನು ಜೈಲಿಗೋದ್ರು ಸರಿ. ಯಾರು ಸಹಾಯ ಮಾಡದೆ ಇದ್ದರೂ ಸರಿ, ಬೇಕಾದರೆ ನಾನು ಪ್ರಾಣ ಕಳೆದುಕೊಳ್ಳುತ್ತೇನೆ. ಆದರೆ ಬೇರೆಯವರ ಮುಂದೆ ತಲೆ ತಗ್ಗಿಸುವುದಿಲ್ಲ ಎಂದು ಹೇಳುತ್ತಿದ್ದಳು. ಆದರೆ ಲೇಖಕಿಯ ಮಾತನ್ನು ಲೆಕ್ಕಿಸದೆ ಅವರ ಅಣ್ಣ ಮತ್ತು ತಂದೆ ಆ ಕೇಸಿನಿಂದ ಬಿಡುಗಡೆಗೊಳಿಸುವುದಕ್ಕೆ ಹೋರಾಡುತ್ತಲೇ ಇದ್ದರು.

ಕಾರ್ಮಿಕರ ಪರವಾಗಿ ಅವರ ನ್ಯಾಯದ ಪರವಾಗಿ ಹೋರಾಡಲು ಹುಟ್ಟಿಕೊಂಡ ನೌಕರರ ಸಂಘದವರೂ ಕೂಡ ಲೇಖಕಿಯನ್ನು ಅನುಮಾನದ ದೃಷ್ಟಿಯಿಂದ ನೋಡುತ್ತಿದ್ದರು. ಪರೋಕ್ಷವಾಗಿ ಹಣ ತಿಂದಿರುವಂತೆ ಒಪ್ಪಿಕೊಳ್ಳಿ ಎನ್ನುವಂತೆ ಮಾತನಾಡುತ್ತಿದ್ದರು.

ಒಂದು ಸಮಾಜದಲ್ಲಿ ಪುರುಷನು ರೂಪಿಸಿಕೊಂಡಿರುವ ಎಲ್ಲಾ ವ್ಯವಸ್ಥೆಯಲ್ಲಿ ಲೇಖಕಿ ಅನಾಥಳಾಗಿಯೇ ಬದುಕುತ್ತಿರುತ್ತಾಳೆ. ಅವಳು ಮಾಡದಿರುವ ತಪ್ಪುಗಳನ್ನು ಮಾಡಿರುವಂತೆ ಸಮಾಜ ಅನುಮಾನಿಸುತ್ತಿರುತ್ತದೆ. ಅನುಮಾನಗಳ ಕೊಂಡಿಯಲ್ಲಿ ಸಿಲುಕಿಕೊಂಡ ಲೇಖಕಿ ಮಾತ್ರ ತನ್ನ ಜೀವನದಲ್ಲಿ ನರಳುತ್ತಲೇ ಬದುಕುತ್ತಿರುತ್ತಾಳೆ.

ಈ ರೀತಿಯ ನೋವುಗಳು ಕೇವಲ ಒಂದು ವರ್ಗದ ಮಹಿಳೆಯರಿಗೆ ಮಾತ್ರ ಸೀಮಿತವಾಗಿರದೆ ಜಗತ್ತಿನ ಎಲ್ಲಾ ಮಹಿಳೆಯರು ಪಾಲುದಾರರಾಗಿರುತ್ತಾರೆ. ಆದರೆ ಆ ನೋವಿನ ತೀವ್ರತೆ ಬೇರೆ ಬೇರೆಯದಾಗಿರುತ್ತವೆ.

ಮಾಡಿಲ್ಲದ ತಪ್ಪುಗಳನ್ನು ಹೊತ್ತು ನ್ಯಾಯಾಲಯಕ್ಕೆ ತಿರುಗಿ ನೂರಾರು ಅಧಿಕಾರಿಗಳಿಗೆ ಕೈ ಮುಗಿದು ಮೂರು ಕ್ರಿಮಿನಲ್ ಕೇಸುಗಳಿಂದ ಹೊರಬಂದ ನಂತರ ಪುನಃ ಕೆಲಸಕ್ಕೆ ಹೋಗಬೇಕಾದ ಪ್ರಸಂಗಗಳು ಬಂದವು. ಮತ್ತೆ

ಕೆಲಸಕ್ಕೆ ಹೋಗುವ ಮೊದಲ ದಿನ ಅನುಭವಿಸಿದ ಮುಜುಗರ, ಸಂಕಟ ತುತ್ತತುದಿಯನ್ನು ಮುಟ್ಟಿರುತ್ತದೆ. ತನ್ನ ತಳಮಳವನ್ನು ನೀಗಿಸಿಕೊಳ್ಳಲು ತನ್ನ ಸ್ನೇಹಿತರಿಗೆ ಫೋನ್ ಮಾಡಿ ಆಫೀಸಿಗೆ ಹೋಗಿ ತನ್ನ ಕೆಲಸದಲ್ಲಿ ತೊಡಗಿಸಿಕೊಂಡಳು. ಅಲ್ಲಿ ಕೆಲಸ ಮಾಡುತ್ತಿದ್ದವರು ಯಾರೂ ಕೂಡ ಸರಿಯಾಗಿ ಮಾತನಾಡಿಸದೆ ಎಲ್ಲರೂ ಅನುಮಾನಿಸುವಂತೆ ನೋಡುತ್ತಿದ್ದರು. ಕೆಲವರು ನೋಡಿಯೂ ನೋಡದಂತೆ ವರ್ತಿಸುತ್ತಾರೆ. ಮೊದಲು ಮಾತಾಡಿಸ್ತ ಇದ್ದವರು ಈಗ ಮಾತಾಡಿಸುತ್ತಿಲ್ಲ. ಅಲ್ಲಿದ್ದವರಲ್ಲಿ ಕೆಲವರು ಅಪರಿಚಿತರು. ಆದುದರಿಂದ ಅಪನಂಬಿಕೆಯಿಂದ ನೋಡುವುದು ಸಹಜವಾಗಿರುತ್ತದೆ.

ಸಮಾಜವೇ ಈ ರೀತಿಯದಲ್ಲವೆ. ನಾವುಗಳು ಯಾವುದನ್ನೂ ಸರಿಯಾಗಿ ತಿಳಿಯದೆ ಆ ವಿಷಯದ ಬಗ್ಗೆ ಪೂರ್ವಾಗ್ರಹಗಳನ್ನು ಬೆಳೆಸಿಕೊಂಡಿರುತ್ತೇವೆ. ಅವುಗಳನ್ನ ಸತ್ಯ ಎಂದು ನಂಬಿರುತ್ತೇವೆ. ಈ ರೀತಿಯ ಸ್ವಕಲ್ಪಿತ ನಂಬಿಕೆಗಳನ್ನು ಹೊರದೂಡುವುದು ಸುಲಭದ ಮಾತಾಗಿರುವುದಿಲ್ಲ. ಆ ಪೂರ್ವಾಗ್ರಹಗಳು ನಾಶವಾಗಿ ಹೊಸ ನಂಬಿಕೆಗಳು ಹುಟ್ಟಿದರೂ, ಅರಿವಿಲ್ಲದೆ ಅಪನಂಬಿಕೆಗಳು ತಲೆ ಎತ್ತುತ್ತಿರುತ್ತವೆ.

ಕೆಲವರು ಬೇಕಾಗಿಯೇ ಇನ್ನೊಬ್ಬರಿಗೆ ನೋವು ಕೊಡುವುದಕ್ಕಾಗಿಯೆ ಇಲ್ಲದ ತಂತ್ರಗಳನ್ನು ಬಳಸುತ್ತಿರುತ್ತಾರೆ. ಲೇಖಕಿ ಮೊದಲು ಕೆಲಸ ಮಾಡುತ್ತಿದ್ದಾಗ ಇದ್ದ ಮೇಲಧಿಕಾರಿಗಳು ಬಿಡುವಿನ ವೇಳೆಯಲ್ಲಿ informal ಆಗಿ ಮಾತಾಡುತ್ತಾ ತೀಟೆ ತೀರಿಸಿಕೊಳ್ಳುತ್ತಿರುತ್ತಾರೆ. ಜೊತೆಗೆ ಅವಮಾನವಾಗುವಂತೆ ಮಾತನಾಡಿಸುವುದು ಯಾವುದಾದರೂ ನೆಪದಿಂದ ಲೇಖಕಿಯರಿಗೆ ನೋವು ಕೊಡುವುದು ಅವರ ಉದ್ದೇಶವಾಗಿರುತ್ತಿತ್ತು.

ಈ ರೀತಿಯ ಸಮಸ್ಯೆಗೆ ಸಿಕ್ಕಿಕೊಂಡ ಲೇಖಕಿ ಒಂದಲ್ಲಾ ಒಂದು ರೀತಿಯ ನೋವುಗಳನ್ನ ಅನುಭವಿಸಲೇ ಬೇಕಿರುತ್ತದೆ. ಎಲ್ಲಾ ನೋವುಗಳನ್ನ ದೌರ್ಜನ್ಯಗಳನ್ನ ತುಳಿಯುತ್ತ ಬೆಳೆಯುವ ಸ್ಥಿತಿಗೆ ತಲುಪುವಂತೆ ಮಾಡಿದ್ದೂ ಕೂಡ ಇದೇ ಸಮಾಜ.

ಮುಗ್ಧ ಮಗುವಿನಂತೆ ತಾಯಿಯ ಜೊತೆಯಲ್ಲಿ ತಾಯಿಯ ಸೀರೆ ಸೆರಗನ್ನ ಕೈಯಲ್ಲಿ ಹಿಡಿದು ಸುತ್ತುತ್ತಿದ್ದ ಹುಡುಗಿ ಮುಂದೆ ಈಗೇನ್ ಮಾಡೀರಿ ? ಎನ್ನುವಂತೆ ಪ್ರಶ್ನಿಸುವ ಹಂತಕ್ಕೆ ತಲುಪುವಂತೆ ಹಾಗಬೇಕಾದರೆ ತಿಂದ ಪೆಟ್ಟುಗಳು ಸಹಸ್ರಾರು ಆ ಎಲ್ಲಾ ಅನುಭವಗಳ ಫಲವೇ ಈ ರೀತಿಯ ಪ್ರಶೆ.

ಎಲ್ಲಾ ಕಷ್ಟಗಳನ್ನು ಸಹಿಸಿಕೊಂಡು ಅದರಿಂದ ಹೊರ ಬಂದು ಲೇಖಕಿ ಒಂದು ಸುಂದರವಾದ ಕನಸು ಕಾಣುತ್ತಾರೆ.

"ಕಣ್ಮುಚ್ಚಿ ಹಾರುದ್ರು, ಹಾರಿದಂಗೆ ಹಗುರಾದ್ರು ಹಾರ್‍ತ ಹಾರ್‍ತ ದೊಡ್ಡಗೋಡೆಗಳು, ಗೇಟು, ಕೋರ್ಟು, ಪೋಲೀಸ್ ಸ್ಟೇಷನ್ ಹಿಂದೆ ಹಿಂದೆ ಬೀಳ್ತಾ ಇದ್ದು ಯಪ್ಪ, ಸಿಕ್ದೆ ಅಂತ ಎಷ್ಟ್ ಕಾಡ್ಪುಲ್ರಿ ನನ್ನ ಈಗೇನ್ ಮಾಡೀರಿ ?"

## ಆರ್ಥಿಕವಾಗಿ ಹೆಣ್ಣು

"ಈಗೇನ್ ಮಾಡೀರಿ ?" ಆತ್ಮಕಥೆಯಲ್ಲಿ ಒಂದು ಹೆಣ್ಣು ಆರ್ಥಿಕ ಕಾರಣದಿಂದಾಗಿಯೆ ನೂರಾರು ಸಮಸ್ಯೆಗಳಿಗೆ ಸಿಲುಕಿಕೊಳ್ಳುವಂತೆ ಆಗಿದೆ. ಬಹುಶಃ ಇಂದಿನ ಆಧುನಿಕ ಸಮಾಜದ ಮಹಿಳೆಯರು ಹೊಸ ಬದುಕುಗಳನ್ನು ಬಯಸಿ ಹೊರ ಜಗತ್ತಿಗೆ ಬರುತ್ತಿದ್ದಾರೆ. ಮೊದಲಿಗೆ ಅವಳು ಆರ್ಥಿಕವಾಗಿ ಮುಂದೆ ಬಂದರೆ ಈ ಪುರುಷ ಪ್ರಧಾನ ಸಮಾಜದ ಮುಲಾಜುಗಳಿಂದ ಹೊರಬರಬಹುದು ಎಂದು ಭಾವಿಸಿದ್ದಳು. ಆದರೆ ಅವಳ ಅನಿಸಿಕೆಗೆ ವಿರುದ್ಧವಾದಂತಹ ಬದಲಾವಣೆಗಳು ಇಲ್ಲಿ ಹುಟ್ಟಿಕೊಂಡವು. ಮೊದಲಿದ್ದ ಸಮಸ್ಯೆಗಳು ಆಧುನಿಕ ಸಮಾಜದಲ್ಲಿ ಬೇರೆ ರೂಪಗಳನ್ನು ಪಡೆದವು. ಇಂದು ಜಾಹೀರಾತುಗಳನ್ನು ಗಮನಿಸಿದರೆ ಹೆಣ್ಣು ಹೀಗೆ ಮಾರುಕಟ್ಟೆಯ ವಸ್ತುವಿನೊಂದಿಗೆ ತನ್ನನ್ನು ತಾನೇ ಮಾರಾಟಮಾಡಿಕೊಳ್ಳುತ್ತಿದ್ದಾಳೆ ಎನ್ನುವುದು ತಿಳಿಯುತ್ತದೆ. ಹಾಗಂತ ಹೆಣ್ಣು ಮನೆಯಲ್ಲಿಯೇ ಬದುಕಬೇಕು ಎಂದರ್ಥವಲ್ಲ ಆರ್ಥಿಕವಾಗಿ ಬದಲಾದಂತೆ ಅವಳನ್ನು ನೋಡುವ ಸಮಾಜದ ದೃಷ್ಟಿ ಕೂಡ ಬದಲಾಗಬೇಕು. ಈ ಆತ್ಮಕಥೆಯಲ್ಲಿ ಬರುವ ಲೇಖಕಿಯ ಬದುಕನ್ನೆ ಗಮನಿಸಿದರೆ ಇಂದಿನ ಸ್ಥಿತಿಗಳು ತಿಳಿಯುತ್ತದೆ. ಸಾಮಾಜಿಕವಾಗಿ ಕೆಳ ಸಮುದಾಯದಲ್ಲಿ ಹುಟ್ಟಿದರೂ ತನ್ನ ಮನೆಯಲ್ಲಿ ಎಲ್ಲರೂ ಓದಿಕೊಂಡು ಉದ್ಯೋಗದಲ್ಲಿರುವಂತಹ ಮನೆಯ ಹೆಣ್ಣು ಮಗಳಿಗೂ ಕೂಡ ಓದುವ ಭಾಗ್ಯ ದೊರೆಯುತ್ತದೆ. ಈ ರೀತಿಯ ಅವಕಾಶಗಳನ್ನು ಬಳಸಿಕೊಂಡ ಲೇಖಕಿ ಓದಿ ಒಂದು ಕಛೇರಿಯಲ್ಲಿ ಕೆಲಸಕ್ಕೆ ಸೇರುತ್ತಾರೆ. ಒಂದು ಕೆಲಸಕ್ಕೆ ಸೇರುವುದೇ ತನ್ನ ಆರ್ಥಿಕ ಬದುಕನ್ನು ಸುವ್ಯವಸ್ಥೆಗೆ ತರುವುದಕ್ಕಾಗಿ ಅಲ್ಲವೆ ?

ಯಾವುದೇ ಸಮುದಾಯದ ಕುಟುಂಬ ಆರ್ಥಿಕವಾಗಿ ಮುಂದೆ ಹೋದಂತೆಲ್ಲ ಅವರ ಸಾಮಾಜಿಕ ಬದುಕು ಕೂಡ ಬದಲಾಗುತ್ತಿರುತ್ತದೆ. ಅಂದರೆ ಅವರ ಆಹಾರ ಪದ್ಧತಿ, ಅವರ ವಾಸಸ್ಥಳದ ಪರಿಸರ ಅವರು ತೊಡುವ ಬಟ್ಟೆ, ಒಟ್ಟಾರೆಯಾಗಿ ಅವರ ಸಮಗ್ರ ಬದುಕು ಬದಲಾವಣೆಯ ದಿಕ್ಕಿಗೆ ಸಾಗಲು ಪ್ರಾರಂಭವಾಗುತ್ತದೆ. ಈ ರೀತಿಯ ಬದಲಾವಣೆಗೆ ಪ್ರಾರಂಭದಲ್ಲೆ ತೊಡಕುಗಳು ಸೃಷ್ಟಿಯಾಗುತ್ತದೆ. ಆ ತೊಡಕುಗಳು ಯಾವ

ರೀತಿಯಲ್ಲಾದರೂ ಇರಬಹುದು. ಉದಾಹರಣೆಗೆ ಈ ಆತ್ಮಕಥೆಯ ಲೇಖಕಿ ಅನುಭವಿಸಿದ ತೊಡಕನ್ನೇ ನೋಡಿ ಮ್ಯಾನೇಜರ್ ಮತ್ತು ಕ್ಯಾಶಿಯರ್‌ರವರನ್ನು ಹಿತವರು ಎಂದು ಭಾವಿಸಿ ಅವರನ್ನು ನಂಬಿಕೊಂಡು ತನ್ನ ಕೆಲಸದಲ್ಲಿ ನಿರತವಾಗಿರುವಂತಹ ಹೆಣ್ಣಿಗೆ ತಿಳಿಯದಂತೆ ಬಲೆಗಳನ್ನು ಈ ವ್ಯಕ್ತಿಗಳು ಸೃಷ್ಟಿಸಿರುತ್ತಾರೆ. ಹಣದ ಆಸೆಗಾಗಿ ಇನ್ನೊಬ್ಬರನ್ನು ಕಷ್ಟಕ್ಕೆ ಸಿಲುಕಿಸಿ ತಾವು ಹಣ ಗಳಿಸುವ ಮಾರ್ಗ ಎಷ್ಟು ಸರಳವಾಗಿರುವಂತಹುದು. ಆದರೆ ಅದರ ಶಿಕ್ಷೆ ಮಾತ್ರ ತಪ್ಪು ಮಾಡದ ಒಂದು ಮುಗ್ಧ ಹೆಣ್ಣು ಅನುಭವಿಸುತ್ತಲೆ ಅದನ್ನು ಮೀರಿ ಹೊರಬರಬೇಕಾದರೆ ಎಷ್ಟೊಂದು ಕಾಲ ತೆಗೆದುಕೊಳ್ಳುತ್ತದೆ. ಕಷ್ಟ ಕೊಟ್ಟ ಜನ ನಾವು ಯಾವ ತಪ್ಪು ಮಾಡದವರಂತೆ ಅದನ್ನು ಸಮರ್ಥಿಸಿಕೊಂಡು ಬದುಕುತ್ತಿರುತ್ತಾರೆ.

ಲೇಖಕಿ ಐದು ವರ್ಷ ಕೆಲಸ ಕಳೆದುಕೊಂಡು ಪುನಃ ಕೆಲಸಕ್ಕೆ ಬಂದಾಗ ಮೊದಲಿನ ಪುರುಷ ವರ್ಗ ಕಿಚಾಯಿಸಿ ಮಜಾ ಪಡೆಯುತ್ತಿರುತ್ತದೆ. ಆಗಲೂ ಅವರಿಗೆ ತಾವು ಮಾಡಿರುವ ತಪ್ಪಿಗೆ ನೋವನ್ನು ಅನುಭವಿಸದೆ ಬದುಕುತ್ತಾರಲ್ಲ. ಇದನ್ನೇ ಪುರುಷತ್ವ ಎನ್ನುವುದು. ಇದರ ಜೊತೆ ಜೊತೆಯಲ್ಲೆ ಒಂದು ಹೆಣ್ಣಿನ ಬದುಕನ್ನು ನೋಡಿದರೆ ಅವಳು ತಪ್ಪು ಮಾಡದಿದ್ದರೂ ಸಮಾಜ ನನ್ನನ್ನು ಅವಮಾನಿಸುತ್ತದೆ. ನನ್ನ ಮೇಲೆ ಕಳಂಕ ಹೊರಿಸಿದೆ ಎಂದು ಕಣ್ಣೀರಿಡುತ್ತ ಬದುಕುತ್ತಿರುತ್ತಾಳೆ. ಈ ರೀತಿಯ ಅಂಶಗಳು ಗಂಡು ಮತ್ತು ಹೆಣ್ಣಿನ ಬದುಕನ್ನು ಬೇರೆ ಮಾಡುತ್ತಿರುತ್ತದೆ.

ಈ ಆತ್ಮಕಥೆಯಲ್ಲಿ ರಾಜಕೀಯ ಅಂಶಗಳು ಕಂಡುಬರದೆ ಕೇವಲ ಹೆಣ್ಣಿನ ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಬದುಕುಗಳು ಹೆಣ್ಣಿನ ಸುತ್ತ ಸುತ್ತಿಕೊಂಡಿವೆ. ಒಟ್ಟಾರೆಯಾಗಿ ಹೇಳುವುದಾದರೆ ಲೇಖಕಿ ದಲಿತ ಸಮುದಾಯದಲ್ಲಿ ಹುಟ್ಟಿದ್ದರೂ ಆರ್ಥಿಕವಾಗಿ ಸುಧಾರಿಸಿರುವಂತಹ ಮನೆಯಲ್ಲಿಯೆ ಬೆಳೆದು ತನ್ನ ಬದುಕುಗಳನ್ನು ಕಟ್ಟಿಕೊಂಡಾಗ ಅವಳು ಅನುಭವಿಸುವ ಯಾತನೆಗಳನ್ನು ಈಗೇನ್ ಮಾಡೀರಿ ? ಆತ್ಮಕಥೆಯಲ್ಲಿ ಗುರುತಿಸಬಹುದಾಗಿದೆ.

## ಅಧ್ಯಾಯ ಐದು

# ಸಮಾರೋಪ

ಕನ್ನಡ ಸಾಹಿತ್ಯಕ್ಕೆ ಸಾವಿರ ವರ್ಷಗಳ ಇತಿಹಾಸವಿದೆ. ಈ ಇತಿಹಾಸದಲ್ಲಿ ಅನೇಕ ವೈವಿಧ್ಯಗಳಿವೆ. ಕಾಲದಿಂದ ಕಾಲಕ್ಕೆ ಹೊಸ ಆಶಯುಗಳೊಂದಿಗೆ ಹುಟ್ಟಿದ ಸಾಹಿತ್ಯ ಶಾಶ್ವತವಾಗಿ ನೆಲೆ ನಿಂತಿವೆ.

ಸಾಹಿತ್ಯ ಬರೀ ಸಾಹಿತ್ಯವಾಗಿರದೆ, ನೋವು-ನಲಿವುಗಳ ಗಾನವಾಗಿರಬೇಕು ಎನ್ನುವ ಆಶಯದೊಂದಿಗೆ ಕನ್ನಡ ಸಾಹಿತ್ಯ ಬೆಳೆದು ಬಂದಿದೆ.

ಆಧುನಿಕ ಕನ್ನಡ ಸಾಹಿತ್ಯ ಘಟ್ಟಗಳಲ್ಲಿ ದಲಿತ ಸಾಹಿತ್ಯವೂ ಸಹ ಬಹಳ ಮುಖ್ಯವಾಗಿರುವಂತಹದು. ಆದುದರಿಂದ ದಲಿತ ಸಾಹಿತ್ಯವನ್ನು ಚರ್ಚಿಸುವಾಗ, ಕಾಣಿಸಿಕೊಳ್ಳುವ ಪ್ರಶ್ನೆ, ಕನ್ನಡ ಸಾಹಿತ್ಯದಲ್ಲಿ ಏಕೆ ದಲಿತ ಆತ್ಮಕಥೆಗಳು ಹೆಚ್ಚಾಗಿ ಹುಟ್ಟಿಕೊಳ್ಳಲಿಲ್ಲ ಎನ್ನುವಂತಹದು.

ಮೊಟ್ಟಮೊದಲು ಕನ್ನಡದಲ್ಲಿ ಪ್ರೊ॥ ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥೆಯಾಗಿ ಹೊರಬಂದ ನಂತರ 'ಊರುಕೇರಿ', 'ಈಗೇನ್ ಮಾಡೀರಿ ?' ಆತ್ಮಕಥೆಗಳು ಹೊರಬಂದವು. ಇದಕ್ಕೂ ಮೊದಲು ನವೋದಯ, ನವ್ಯ ಪಂಗಡದವರ ಆತ್ಮಕಥೆಗಳು ಬಂದಿದ್ದವು. ಇವುಗಳ ಜೊತೆಗೆ ಮರಾಠಿ ಆತ್ಮಕಥೆಗಳೂ ಕೂಡ ಕನ್ನಡ ಸಾಹಿತ್ಯದ ಮೇಲೆ ಪ್ರಭಾವ ಬೀರಿದ್ದವು. ಇಂತಹ ಸಂದರ್ಭದಲ್ಲಿ ಬಂದ ದಲಿತ ಆತ್ಮಕಥೆಗಳು ಭಿನ್ನವಾದ ಸಂವೇದನೆಗಳಿಂದ ಕೂಡಿದ್ದಂತಹವು. ದಲಿತ ಸಾಹಿತಿಯ ಆತ್ಮಕಥೆಗಳು ಒಬ್ಬ ಖಾಸಗೀ ವ್ಯಕ್ತಿಯ ಕಥನವಾಗುವುದಕ್ಕಿಂತ ತನ್ನ ಸಮುದಾಯದ ಸಮಗ್ರ ಬದುಕಿನ ಮೊತ್ತವಾಗಿರುತ್ತದೆ.

ದಲಿತ ಆತ್ಮಕಥೆಗಳು ಕೇವಲ ವೈಚಾರಿಕ ನೆಲಗಟ್ಟಿನಿಂದ ಬರದೆ ಅವುಗಳ ಹಿಂದೆ ನೋವು, ಹಸಿವು ಅನುಭವಗಳನ್ನ ಗುರುತಿಸಬಹುದು.

ಅಧ್ಯಯನಕ್ಕೆ ಆಯ್ಕೆಮಾಡಿಕೊಂಡಿರುವ ಮೂರು ಆತ್ಮಕಥೆಗಳಲ್ಲಿ ಬರುವ ಹೆಣ್ಣುಗಳು, ಒಬ್ಬರಿಗಿಂತ ಒಬ್ಬರು ಭಿನ್ನವಾಗಿ ಕಾಣುತ್ತಾರೆ.

ಬಹಳ ಮುಖ್ಯವಾಗಿ ಕಾಣಿಸುವ ಹೆಣ್ಣುಗಳೆಂದರೆ ಗೌರ್ಮೆಂಟ್ ಬ್ರಾಹ್ಮಣದ 'ಅಜ್ಜಿ' ಊರುಕೇರಿಯ ಲೇಖಕರ 'ಅಮ್ಮ' ಮತ್ತು ಈಗೇನ್ ಮಾಡೀರಿ ?ಯ ಲೇಖಕಿಯ 'ತಾಯಿ'.

ಗೌರ್ಮೆಂಟ್ ಬ್ರಾಹ್ಮಣದ ಅಜ್ಜಿ ಬೇರೆಯ ಹೆಣ್ಣುಗಳಿಗಿಂತ ಗಟ್ಟಿಯಾಗಿ ನಿಲ್ಲುತ್ತಾಳೆ. ಕಾರಣ ತನ್ನ ಜಾಣತನ, ಜಿಗುಟುತನ, ತಾಯ್ತನ ಸಾಹಸಗಳಿಂದ ಈ 'ಆಯಿ' ಚೈತನ್ಯಶೀಲ ವ್ಯಕ್ತಿಯಾಗಿ ಕಾಣುತ್ತಾಳೆ.

ತನ್ನ ಮೊಮ್ಮಕ್ಕಳಿಗೆ ಮಾರ್ಗದರ್ಶಕಿಯಾಗಿ ಅವರು ಆದಾಯಗಳಿಗೆ ಕಾರಣಳಾಗುತ್ತಾಳೆ. ಕೋಳಿಯಂತೆ ತನ್ನ ರೆಕ್ಕೆಯ ಕೆಳಗೆ ರಕ್ಷಿಸಿಕೊಂಡಿರುತ್ತಾಳೆ.

ಈ ಅಜ್ಜಿಯ ಕುಟುಂಬದ ಮೇಲೆ ಯಾರಾದರೂ ಜಗಳಕ್ಕೆ ಬಂದರೆ ಯಾವುದೇ ಮುಲಾಜಿಲ್ಲದೆ ಜಾಡಿಸಿ ಕಳಿಸುತ್ತಾಳೆ.

ಬಟ್ಟೆ ತೊಳೆಯಲು ಹೋಗುವ ಸೊಸೆಯರಿಗೆ ಶಕ್ತಿಯಾಗಿ 'ಆಯಿ' ಕಾಣಿಸುತ್ತಾಳೆ. ಮೇಲು ಜಾತಿಯವರ ಮದುವೆಯ ಊಟಕ್ಕೆ ಹೋದ ಮೊಮ್ಮಕ್ಕಳಿಗೆ ನಾಯಕಿಯಾಗಿ 'ಆಯಿ' ರಕ್ಷಿಸುತ್ತಾಳೆ. ಆದುದರಿಂದಲೆ ದೇವನೂರು ಮಹಾದೇವರ ಕಥೆಯ ಸಾಕವ್ವನಂತೆ ಈ ಅಜ್ಜಿ ಆತ್ಮಕಥೆಯಲ್ಲಿ ಕೇಂದ್ರಪಾತ್ರವಾಗಿ ಕಾಣಿಸುತ್ತಾಳೆ. ಈ ಅಜ್ಜಿಯ ಸುತ್ತ ಬೇರೆ ಬೇರೆಯ ಬದುಕುಗಳು ಸುತ್ತಿಕೊಂಡಿರುತ್ತವೆ.

ಊರುಕೇರಿಯಲ್ಲಿ ಬಹಳ ಮುಖ್ಯವೆಂದು ತಿಳಿದು ಚರ್ಚಿಸಬಯಸುವ ಹೆಣ್ಣುಗಳ ಪಾತ್ರಗಳು ಅಷ್ಟಾಗಿ ಕಾಣುವುದಿಲ್ಲ. ಆದರೆ ಆ ಕೇರಿಯಲ್ಲಿ ಭಿನ್ನವಾಗಿ ಕಾಣುವ ಹೆಣ್ಣೆಂದರೆ ಲೇಖಕರ ತಾಯಿ. ಬಡತನ ತಾಳಲಾಗದೆ, ಮಕ್ಕಳನ್ನು ಸಾಕಲಾರದೆ ಹೆಚ್ಚು ವರ್ಷಗಳು ಮನೆಬಿಟ್ಟು ಹೋದ ತನ್ನ ಗಂಡನನ್ನು ಲೆಕ್ಕಿಸದೆ ಕಷ್ಟಪಟ್ಟು, ಸೌದೆ ಮಾರಿ, ಹಾಸ್ಟೆಲ್‌ನಲ್ಲಿ ಕೆಲಸ

ಮಾಡಿಕೊಂಡು ತನ್ನ ಮಕ್ಕಳನ್ನು ಬೆಳೆಸುತ್ತಾಳೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವಂತಹ ಮೂರು ಆತ್ಮಕಥೆಗಳಲ್ಲಿ ಬರುವ ಹೆಣ್ಣುಗಳಲ್ಲಿ ಹೆಚ್ಚು ಬಡತನವನ್ನು ಅನುಭವಿಸಿರುವಂತಹವಳು ಸಿದ್ಧಲಿಂಗಯ್ಯನವರ ತಾಯಿ.

ಊರುಕೇರಿಯಲ್ಲಿ ಕಾಣುವ ಸ್ತ್ರೀಯರು ಹೆಚ್ಚಾಗಿ ಮೌಢ್ಯಕ್ಕೆ ಒಳಗಾಗಿರುವುದನ್ನ ಕಾಣಬಹುದು. ದೇವರು ಧರ್ಮಗಳ ಹೆಸರಿನಲ್ಲಿ ತಮ್ಮನ್ನು ತಾವೇ ಬಂಧಿಸಿಕೊಳ್ಳುವಂತೆ ಕಾಣುತ್ತಾರೆ. ಕೆಲವೊಮ್ಮೆ ಪುರುಷತ್ವದಷ್ಟೆ ಅಪಾಯಕಾರಿಯಾಗಿ ಕಾಣುತ್ತಾರೆ. ಈ ಕಾರಣಗಳಿಂದಾಗಿ ಊರುಕೇರಿಯ ಹೆಣ್ಣುಗಳು ಮುಖ್ಯರಾಗುತ್ತಾರೆ.

ಒಬ್ಬ ದಲಿತ ಹೆಣ್ಣಿನಿಂದ ರಚನೆಯಾದ ಈಗೇನ್ ಮಾಡೀರಿ ? ಆತ್ಮಕಥೆಯು ಮೊದಲ ಎರಡು ಆತ್ಮಕಥೆಗಳಿಗಿಂತ ಭಿನ್ನವಾಗಿ ಕಾಣಿಸುತ್ತದೆ. ಬಹಳ ಮುಖ್ಯವಾಗಿ ಇಲ್ಲಿನ ಸಾಮಾಜಿಕ ಬದುಕು ಮಧ್ಯಮ ಕುಟುಂಬಗಳಂತೆ ಬರುತ್ತದೆ. ಒಂದು ಸಾಮಾನ್ಯ ಮಧ್ಯಮ ಕುಟುಂಬದಲ್ಲಿನ ಹೆಣ್ಣು ಮಗಳಂತೆ ಸದಾ ತಾಯಿಯ ಸೀರೆ ಸೆರಗನ್ನು ಹಿಡಿದು ಸುತ್ತುತ್ತ ಬೆಳೆದು ಶಾಲೆ ಕಾಲೇಜುಗಳ ಮೆಟ್ಟಲನ್ನು ಪೂರೈಸಿ ನಂತರ ಉದ್ಯೋಗ ಕ್ಷೇತ್ರಕ್ಕೆ ಕಾಲಿರಿಸಿದಾಗ ಪಡೆಯುವ ಅನುಭವಗಳ ಚಿತ್ರವಿದೆ. ಇದರ ಜೊತೆ ಜೊತೆಯಲ್ಲಿ ಲೇಖಕಿಯ ತಾಯಿಯ ಮಾತುಗಳಲ್ಲಿ ಕೆಲವು ಮೌಲ್ಯಯುತವಾದಂತಹ ಗುಣಗಳನ್ನು ಗುರುತಿಸಬಹುದಾಗಿದೆ. ತನ್ನದಲ್ಲದ ವಸ್ತುವಿಗೆ ಆಸೆಪಡದೆ ತನಗೆ ಸಿಕ್ಕಿದ್ದು ಮಾತ್ರ ನನ್ನ ಪಾಲಿನದು ಎಂದು ಭಾವಿಸಿಕೊಂಡು ಜೀವಿಸುವಂತೆ ತನ್ನ ಮಗಳಿಗೆ ಒಳ್ಳೆಯ ದಾರಿಯನ್ನು ತೋರಿಸುತ್ತಿರುತ್ತಾಳೆ.

ಲೇಖಕಿಗೆ ಸಿಕ್ಕ ಐದು ಪೈಸೆಯನ್ನು ಕೂಡ ನಮ್ಮ ಪಾಲಿನದಲ್ಲ ಎಂದು ಹೇಳಿ ಅಗತ್ಯಕ್ಕಿಂತ ಹೆಚ್ಚು ಅನ್ನ ತಿಂದರೂ ಕೂಡ ಬೇರೆಯವರ ಅನ್ನವನ್ನ ಕಿತ್ತುಕೊಂಡಂತೆ ಎನ್ನುವ ಮಾತುಗಳು ಇಂದು ಬಹಳ ಮೌಲ್ಯಯುತವಾಗಿ ಕಾಣಿಸುತ್ತವೆ.

ತನ್ನ ತಾಯಿಯ ಮಾತುಗಳನ್ನು ಕೇಳಿ ಮುಗ್ಧ ರೀತಿಯಲ್ಲಿ ಬೆಳೆದ

ಲೇಖಕಿ ಮುಗ್ಧತನದಿಂದಲೇ ಅನೇಕ ತಪ್ಪುಗಳಿಗೆ ಸಿಲುಕಿ, ಜೈಲು, ನ್ಯಾಯಾಲಯಗಳೊಂದಿಗೆ ಬದುಕು ಕಳೆಯಬೇಕಾಗುತ್ತದೆ.

ಆರ್ಥಿಕ ಸ್ಥಿತಿಯಲ್ಲಿ ಮೇಲುಮಟ್ಟದಲ್ಲಿ ಇದ್ದರೂ ಒಂದು ಹೆಣ್ಣಾಗಿದ್ದುದರ ಕಾರಣದಿಂದ ನೋವುಗಳಿಗೆ ಸಿಲುಕಬೇಕಾಗಿರುತ್ತದೆ.

ಮೂರು ಆತ್ಮಕಥೆಗಳಲ್ಲಿ ಬರುವ ಹೆಣ್ಣುಗಳು ಒಂದೇ ಸಮುದಾಯಕ್ಕೆ ಸೇರಿದ್ದರೂ ಒಬ್ಬೊಬ್ಬ ಹೆಣ್ಣಿನ ಬದುಕುಗಳು ಬೇರೆಯಾಗಿರುತ್ತವೆ. ಇಂದು ದಲಿತ ಸಮುದಾಯದ ಹೆಣ್ಣುಗಳು ಬದುಕಿನ ಸಮಗ್ರ ದಿಕ್ಕುಗಳಲ್ಲಿಯೂ ಚಾಚುಕೊಂಡಿದ್ದಾರೆ.

ಆದುದರಿಂದ ಬೇರೆ ಸಮುದಾಯದ ಹೆಣ್ಣುಗಳಿಗಿಂತ ದಲಿತ ಹೆಣ್ಣುಗಳು ಧಾರ್ಮಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಮೇಲುವರ್ಗದ ಹೆಣ್ಣುಗಳಿಗಿಂತ ಬೇರೆಯೇ ಆಗಿರುವಂತೆ ತೋರುತ್ತದೆ.

# ಗ್ರಂಥ ಸೂಚಿ

೧. (ಸಂ) ಡಾ॥ ಅರ್ಜುನ ಗೊಳಸಂಗಿ (೨೦೦೩) ಕನ್ನಡ ದಲಿತ ಸಾಹಿತ್ಯ, ಸಮಾಲೋಕನ, ಕರ್ನಾಟಕ ಸಾಹಿತ್ಯ ಅಕಾಡೆಮಿ – ಬೆಂಗಳೂರು

೨. (ಸಂ) ಪ್ರೊ॥ ಅರವಿಂದ ಮಾಲಗತ್ತಿ (೨೦೦೪) ಕನ್ನಡ ವಿಮರ್ಶೆಯ ಮಾರ್ಗ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ ಮೈಸೂರು

೩. ಪ್ರೊ॥ ಅರವಿಂದ ಮಾಲಗತ್ತಿ (೨೦೦೦) ಗೌರ್ಮೆಂಟ್ ಬ್ರಾಹ್ಮಣ, ಅಭಿರುಚಿ ಪ್ರಕಾಶ – ಮೈಸೂರು

೪. (ಸಂ) ಅಗ್ರಹಾರ ಕೃಷ್ಣಮೂರ್ತಿ (೨೦೦೨) ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೫. ಎಂ. ಆರ್. ಕಮಲ (೨೦೦೪) ಕಪ್ಪು ಹಕ್ಕಿಯ ಬೆಳಕಿನ ಹಾಡು, ಶ್ರೀರಂಗ ಪ್ರಿಂಟರ್ಸ್ ಅಂಡ್ ಬೈಂಡರ್ಸ್, ಬೆಂಗಳೂರು

೬. (ಸಂ.) ಡಾ॥ ನಟರಾಜ್ ಹುಳಿಯಾರ್ ಮತ್ತು ಎಸ್. ಆರ್. ರಾಮಕೃಷ್ಣ (೨೦೦೦) ಕಣ್ಣೆದುರಿನ ಪ್ರಶ್ನೆಗಳು, ರಾಮಮನೋಹರ ಲೋಹಿಯಾ ಬರಹಗಳು – ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೭. (ಸಂ.) ದಂಡಪ್ಪ, ಬಡವರ ನಗುವಿನ ಶಕ್ತಿ.

೮. ಓ. ಎಲ್. ನಾಗಭೂಷಣ ಸ್ವಾಮಿ (೧೯೯೮) ವಿಮರ್ಶೆಯ ಪರಿಭಾಷೆ, ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು–೫೬೦ ೦೦೪

೯. ಡಾ॥ ಪುರುಷೋತ್ತಮ ಬಿಳಿಮಲೆ (೨೦೦೫) ಬಂಡಾಯ ದಲಿತ ಸಾಹಿತ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೦. ಡಾ॥ ಬಸವರಾಜ ಸಬರದ (೨೦೦೨) ಸಮುದಾಯ ಮತ್ತು ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೧. ರಹಮತ್ ತರೀಕೆರೆ (೧೯೯೩) ಪ್ರತಿ ಸಂಸ್ಕೃತಿ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.

೧೨. (ಪ್ರ.ಸಂ.) ಲಕ್ಷ್ಮೀನಾರಾಯಣ ನಾಗವಾರ (೨೦೦೦) ಬಿ. ಬಸವಲಿಂಗಪ್ಪ ಮತ್ತು ಬೂಸ ಚಳುವಳಿಯ ಕಾಲು ಶತಮಾನ, ಕರ್ನಾಟಕ ದಲಿತ ಸಂಘರ್ಷ ಸಮಿತಿ (ರಿ.), ನಾಗವಾರ, ಬೆಂಗಳೂರು.

೧೩. ಲಕ್ಷ್ಮಣ್ (೨೦೦೩) ಸಂಬೋಳಿ, ಆನಂದಕಂದ ಗ್ರಂಥಮಾಲೆ ಮಲ್ಲಡಿಹಳ್ಳಿ.

೧೪. ಡಾ॥ ಎಚ್. ಎಸ್. ಶ್ರೀಮತಿ (೨೦೦೩) ಸ್ತ್ರೀವಾದ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೧೫. ಚ.ನ. ಶಂಕರ್‌ರಾವ್ (೨೦೦೫) ಭಾರತೀಯ ಸಮಾಜ, ಜೈಭಾರತ್ ಪ್ರಕಾಶನ, ಮಂಗಳೂರು.

೧೬. ಡಾ॥ ಎಚ್. ಎಸ್. ಶ್ರೀಮತಿ (೧೯೯೯) ಮಹಿಳಾ ಅಧ್ಯಯನ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೧೭. ಡಾ॥ ಸಿದ್ಧಲಿಂಗಯ್ಯ (೨೦೦೦) ಊರುಕೇರಿ, ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು.

೧೮. ಡಾ॥ ಸಿದ್ಧಲಿಂಗಯ್ಯ (೨೦೦೦) ಮೆರವಣಿಗೆ, ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು.

೧೯. ದು. ಸರಸ್ವತಿ (೨೦೦೧) ಈಗೇನ್ ಮಾಡೀರಿ ? ಇಳಾ ಮುದ್ರಣ, ಬೆಂಗಳೂರು.

